ಹುಬ್ಬಳ್ಳಿ ತಾ.

# ಕರ್ಮವೀರ

ಸಂಪುಟ ೨೮ ] [ ಸಂಚಿಕೆ

ಜನಪ್ರಿಯ ಸಚಿತ್ರ ವಾರಪತ್ರಿಕೆ

ಸಂಪಾದಕರು:
ಪ. ರಾ. ಪುರೋಹಿತ

ಸಂಸ್ಥಾಪಕರು— ಸಿರ್ದೇಶಕರು
ರಂ. ರಾ. ದಿವಾಕರ

● ಅಹಿಂಸೆಯನ್ನೂ ಸತ್ಯವನ್ನೂ ಪರಸ್ಪರ ಬೇರ್ಪಡಿಸಲಾಗದು. ಅವೆರಡೂ ಒಂದೆ. ಸತ್ಯವಿದ್ದಲ್ಲಿ ಅಹಿಂಸೆ, ಅಹಿಂಸೆಯಿದ್ದಲ್ಲಿ ಸತ್ಯ ಇದ್ದೇ ಇರುವದು.

. . . . . . .

● ಸತ್ಯವೇ ದೇವರು. ಸತ್ಯಕ್ಕಿಂತ ಶ್ರೇಷ್ಠನಾದ ದೇವರಿಲ್ಲ. ಎಲ್ಲಕ್ಕೂ ಮೊದಲು ಸತ್ಯಾನ್ವೇಷಣೆಯಲ್ಲಿ ತೊಡಗುವದೇ ಮಾನವಧರ್ಮ.

. . . . . . .

● ಅಹಿಂಸೆಯ ಸಾಧನೆಗೆ ನಮ್ರಭಾವವೇ ಬೇಕು. ಏಕೆಂದರೆ ಅಹಿಂಸೆಯ ಸಾಧನೆಗೆ ಸ್ವಂತದ ಯಾವ ಬಲಾಬಲವೂ ನಡೆಯುವದಿಲ್ಲ. ಪರಮಾತ್ಮನಲ್ಲಿ ಅಚಲಶ್ರದ್ಧೆಯಿಡುವದರಿಂದಲೇ ನಿಜವಾದ ಅಹಿಂಸೆ ಸಾಧಿಸುವದು.

. . . . . . .

● ದೇವರಿಗೆ ಅಂಜುವವನಿಗೆ ಮರಣ ಭಯವೇ ಇಲ್ಲ.

— ಗಾಂಧೀಜಿ



## ರಾಯಭಾರಿ ಸರ್ ಬೆನಗಲ್ ರಾಮರಾಯರು

ಶ್ರೀ. ಅಸಫಅಲ್ಲಿಯವರ ಸ್ಥಾನದಲ್ಲಿ ಅಮೇರಿಕೆಯಲ್ಲಿ ಹಿಂದೀ ರಾಯಭಾರಿಯಾಗಿ ನೇಮಿಸಲ್ಪಟ್ಟ ಸರ್ ಬೆನಗಲ್ ರಾಮರಾಯರು ಕನ್ನಡಿಗರು. ಟೋಕಿಯೋದಲ್ಲಿ ಹಿಂದೀ ಸಂಪರ್ಕಾಧಿಕಾರಿಗಳಾಗಿ ಕೆಲಸ ಮಾಡಿದ ಇವರಿಗೆ ಹೊತ್ತು ಅಮೇರಿಕನ್ ಪ್ರಮುಖರೊಡನೆ ಬಳಕೆಯಾಗಿರುವದರಿಂದ ಈ ಮಹತ್ವದ ಸ್ಥಾನಕ್ಕೆ ಇವರ ನೇಮಕವಾಗಿದ್ದು ಅಭಿನಂದನೀಯ.





ಚಿಕ್ಕಕತೆ

# ಹಿಂದಿನ ಸವಿನೆನಪು*

ವೀ. ಪುಟ್ಟಮಾದಪ್ಪ

"ಅಪ್ಪ . . . ಅಪ್ಪ" ಎಂಬ ನನ್ನ ಪ್ರಿಯ ಕುವರನ ಕೊರಳಿನುಲಿ ದಿನ ಪತ್ರಿಕೆಯೊಂದನ್ನೋದುವುದರಲ್ಲಿ ಮುಗ್ನನಾಗಿದ್ದ ನನ್ನನ್ನು ಹೊಡೆದೆಬ್ಬಿಸಿತು. ತಲೆಯೆತ್ತಿದೆ; ಎದುರಿಗೆ ಪುತ್ರ ಕಂಠೀರವ ಬೆಕ್ಕಿನ ಮರಿಯೊಂದನ್ನು ಬಿಗಿಯಾಗಿ ಹಿಡಿದುಕೊಂಡು ನಗುತ್ತ ನಿಂತಿದ್ದ. ಆ ಬೆಕ್ಕಿನ ಮರಿ ತನ್ನ ಮೇಲಿದ್ದ ಹಿಡಿತದಿಂದ ಬಿಡಿಸಿಕೊಳ್ಳಲು ಬಹಳವಾಗಿ ಹವಣಿಸುತಿತ್ತು. ಆದರೆ ಅದು ಹವಣಿಸಿದಂತೆಲ್ಲಾ ಅದರ ಮೇಲಿನ ಹಿಡಿತದ ಬಿಗಿತವೂ ಹೆಚ್ಚುತಿತ್ತು. ಬೆಕ್ಕಿನ ಮರಿಯನ್ನು ಬಿಟ್ಟು ಬಿಟ್ಟರೆ ತಿನಿಸು, ಗೊಂಬೆಗಳನ್ನು ತಂದುಕೊಡುವೆನೆಂದು ಹೇಳಿದೆ. 'ತಿನಿಸು', 'ಗೊಂಬೆ' ಎಂಬ ಪದಗಳನ್ನಾಲಿಸುತ್ತಲೇ ಬೆಕ್ಕಿನಮರಿಯನ್ನು ನೆಲಕ್ಕೆ ರೊಯ್ಯನೆಸೆದು, ಒಂದೇ ಹಾರಿಗೆ ನನ್ನ ಬಳಿ ಬಂದು "ಯಾವಾಗ ತಂದು ಕೊಡುತ್ತೀಯ" ಎಂದ 'ಮುದ್ದುಮಣಿ' ನಕ್ಕು 'ನಾನು ಹೇಳಿದುದು ನಿಜ ಎಂದು ತಿಳಿದುಕೊಂಡೆಯೇನು. ? ತಮಾಷೆಗೆ ಹೇಳಿದೆ" ಎಂದೆ. ಹಾಗೆ ನಾನು ಹೇಳುತ್ತಲೇ, ಕೋಪಾರುಣ ನೇತ್ರನಾಗಿ, ಮುಷ್ಟಿ ತೋರಿಸಿ "ಹೊಡೀತೇನಿ" ಎಂದ. ನಕ್ಕು ಅವನನ್ನು ಒಳಗೆ ಸೆಳೆದುಕೊಂಡೆ. ಆದರೆ ನನ್ನ ಹಿಡಿತದಿಂದ ತಪ್ಪಿಸಿಕೊಂಡು, ನನ್ನನ್ನು ಶಪಿಸುತ್ತ ಬೆಕ್ಕಿನ ಮರಿ ಓಡಿದ್ದ ದಿಕ್ಕಿಗೆ ತಾನೂ ಓಡಿದ.

ನನಿಯದಲ್ಲಿಟ್ಟಿದ್ದ ಪತ್ರಿಕೆಯನ್ನು ಮತ್ತೆ ಕೈಗೆ ತೆಗೆದುಕೊಂಡೆ. ತುಸು ಹೊತ್ತಿನಲ್ಲಿಯೇ ಕುಮಾರನ ಅಳುವಿನ ಧ್ವನಿ ಕೇಳ ಬಂತು. ಧ್ವನಿಯ ಹಿಂಬದಿಗೇ ಕುಮಾರನೂ ಹತ್ತಿರಕ್ಕೆ ಬಂದ. ಹತ್ತಿರಕ್ಕೆ ಬಂದು ರಕ್ತದಿಂದ ಲಿಪ್ತವಾಗಿದ್ದ ತನ್ನಕೈಗಳನ್ನು ನನ್ನಮುಖಕ್ಕೆ ಹಿಡಿದ. ಗಾಯಗಳನ್ನೊರೆಸಿ, ಔಷಧ ಹಚ್ಚಿಯಾದಮೇಲೆ ಗಾಯಪಡಿಸಿದವರಾರೆಂದು ಕೇಳಿದೆ. ತಾಯಿಯ ಮಡಲಲ್ಲಿ ಆಸರೆ ಹೊಂದಿದ್ದ ಬೆಕ್ಕಿನ ಮರಿಯ ಬಳಿಗೆ ಮತ್ತೆ ಹೋದನೆಂದೂ ಅವನನ್ನು ಕಂಡ ತಕ್ಷಣವೇ ಬೆಕ್ಕು ಕೋಪಗೊಂಡು ಅವನನ್ನು ಗಾಯಗೊಳಿಸಿತೆಂದೂ ಹೇಳಿದ.

ತುಸು ಹೊತ್ತಿನ ಮೇಲೆ ಪ್ರಶ್ನಿಸಿದ "ಅಪ್ಪ . . . ಮರಿಯ ತಾಯಿಗೆ ಏಕೆ ಅಷ್ಟು ಕೋಪ" ನಾನೆಂದೆ "ನೀನು ಅದರ ಮಗುವನ್ನು ನೋಯಿಸಿದೆ. ಅದಕ್ಕೇ ತಾಯಿಗೆ ಅಷ್ಟು ಕೋಪ ಬಂದುದು." "ಆದರೆ ನಾನು ಪ್ರತಿದಿನವೂ ಮರಿಗೆ ಹಾಲೆರೆಯುತ್ತಿದ್ದೇನೆ ಮತ್ತು ಅದನ್ನು ಪ್ರೀತಿಸುತ್ತಿದ್ದೇನೆ."

"ನಿಜ, ನಾನು ಇಲ್ಲವೆನ್ನಲಿಲ್ಲ. ಆದರೆ ನೀನು ಯಾವುದನ್ನು ಚೆಲ್ಲಾಟವೆಂದು ತಿಳಿದಿರುವಿಯೋ ಅದು ಆ ಮರಿಗೆ ಪ್ರಾಣ ಸಂಕಟ. ಎಂದಾದರೂ ಅದರ ಪ್ರಾಣವನ್ನೇ ತೆಗಿಯುತ್ತೀಯೋ ಏನೋ" "ನಾನುಮರಿಗೆನೋವನ್ನುಂಟುಮಾಡಿದರೆ,ಅದರ ತಾಯಿಗೇಕೆ ನನ್ನಮೇಲೆ ಸಿಟ್ಟು?" "ತನ್ನ ಮಕ್ಕಳನ್ನು ಸುರಕ್ಷಿತವಾಗಿ ನೋಡಿಕೊಳ್ಳುವುದೇ ಎಲ್ಲ ತಾಯಿಯರ ಕರ್ತವ್ಯ." "ಹಾಗಾದರೆ ನನ್ನ ಸ್ನೇಹಿತರು ನನ್ನನ್ನು ಒಯ್ದು ಹೊಡೆಯುತ್ತಿದ್ದರೆ ನನ್ನ ತಾಯಿಯೇಕೆ ನನ್ನ ರಕ್ಷಣೆ ಮಾಡುವುದಿಲ್ಲ?" "ನನ್ನ ಕಣ್ಣುಗಳು ಮಂಜಾದುವು. ಹೃದಯದ ಭಾರ ಹೆಚ್ಚಿತು." "ಆದರೆ ನಿನಗೆ ತಾಯಿಯಿಲ್ಲವಲ್ಲ." "ಎಲ್ಲಿಗೆ ಹೋಗಿದ್ದಾಳಪ್ಪ." "ಸ್ವರ್ಗಕ್ಕೆ ಮಗು" ಕತ್ತರಿಸುವ ನುಡಿಗಳಿಂದ ಉತ್ತರಿಸಿದೆ. ತುಸು ಹೊತ್ತು ತೆಪ್ಪಗಿದ್ದ ಬಳಿಕ ನನ್ನಮ್ಮ ಹೇಗಿದ್ದಳಪ್ಪ" ಎಂದ. "ಹೇಗೆ!... ಹೇಗೆ!!.. ನಿನ್ನ ಹಾಗೇ ಇದ್ದಳಪ್ಪ." "ನನ್ನಂತೆ..ಹಾಗಾದರೆ ನನ್ನ ತಾಯಿ ನನ್ನಷ್ಟು ತುಂಟಳಾಗಿ, ನನ್ನಷ್ಟು ಚಿಕ್ಕವಳಾಗಿ, ಕುಳ್ಳಾಗಿದ್ದಳೇ. " ಹೌದು ಮಗು..ಸುಂದರಿ.... ಬಾಲೆ....ತುಂಟತನದಲ್ಲಿ ಎತ್ತಿದ ಕೈ." "ಹೇಗೆ ಸತ್ತಳಪ್ಪ" ಮತ್ತೆ ಪ್ರಶ್ನಿಸಿದ ನನ್ನ ಕುಮಾರ. ಪಕ್ಕಕ್ಕೆ ಹೊರಳಿ ಕುಡಿಗಳಲ್ಲಿ ಮಿನುಗುತ್ತಿದ್ದ ನೀರನ್ನು ಒರಸಿದೆ. ಕೊನೆಗೆ ಅವಳಲ್ಲಿ ಒಂದು ತಪ್ಪು ಭಾವನೆ ಬೇರೂರಿತ್ತು. ತನ್ನ ಪ್ರಾಣಕ್ಕಿಂತಲೂ ಮಿಗಿಲಾಗಿ ಅವಳು ನನ್ನನ್ನು ಪ್ರೇಮಿಸಿದ್ದಳು. ಅವಳ ಅತಿಪ್ರೇಮ ಅವಳ ಪ್ರಾಣವನ್ನೇ ಹಿಂಡಿತು." "ನನಗೆ ಎಲ್ಲವನ್ನೂ ತಿಳಿಸಪ್ಪ. ಅಮ್ಮನಿಗೆ ಸಂಬಂಧಪಟ್ಟ ಸರ್ವ ವಿಷಯಗಳನ್ನೂ ತಿಳಿಸು" ಎಂದ ಕರಿ "ಆಗಲಿ ಮಗು, ಆದರೆ ಈಗ ಬೇಡ. ರಾತ್ರಿಗೆ ಎಲ್ಲ ಹೇಳುತ್ತೇನೆ" ಎಂದೆ.

× × ×

ನಿನಗೆ ತಿಳಿಯದು ಮಗು, ಬಹಳ ಹಿಂದಿನ ಮಾತು. ಆಗ ನಾನೂ ನಿನ್ನ ತಾಯಿಯೂ ಸಹಪಾಠಿಗಳಾಗಿದ್ದೆವು. ನಮ್ಮಿಬ್ಬರ ಸ್ನೇಹ ಹೇಗೆ, ಎಲ್ಲಿ ಅಂಕುರಿಸಿತೆಂದು ನನಗೆ ಚೆನ್ನಾಗಿ ಜ್ಞಾಪಕವಿಲ್ಲ. ನಾನು ಆಗ ಇನ್ನೂ ಚಿಕ್ಕವನಾಗಿದ್ದೆ, ಬಹಳ ಮುಂಗೋಪಿ; ಜತೆಗೆ ದೌಷ್ಟ್ಯವೂ ಇತ್ತು. ನಿನ್ನ ತಾಯಿ ರೂಪಸಿಯಾಗಿದ್ದಳು, ಗುಣವಂತೆಯೂ ಹೌದು. ಅವೆಲ್ಲವೂ ಈಗೇಕೆ; ನಾವಿಬ್ಬರೂ ಒಬ್ಬರನ್ನೊಬ್ಬರು ಪ್ರೇಮಿಸಲು ತೊಡಗಿದೆವೆಂದರೆ ಸಾಕು. ಆದರೆ ನಮ್ಮ ಪ್ರೇಮಲಹರಿಗೆ ಅಡ್ಡಿಯೊಂದಿತ್ತು. ನಿನ್ನ ತಾಯಿ ನನ್ನ ಜಾತಿಯವಳಲ್ಲ. ನನ್ನ ತಂದೆ ತಾಯಿಗಳಾದರೋ ಹದಿನಾರಾಣೆ ಮತಾವಲಂಬಿಗಳು. ನನ್ನ ತಂದೆ ತಾಯಿಗಳು ಬದುಕಿರುವಲ್ಲಿ ನಿನ್ನ ತಾಯಿ ನಮ್ಮ ಮನೆಯಲ್ಲಿ ವಾಸಿಸಿರುವುದು ಅಸಂಭವವಾಗಿತ್ತು. ಪ್ರತಿದಿನವೂ ನಿನ್ನ ತಾಯಿ ನನಗೆ ಏನಾದರೊಂದು ಸುವ್ಯವಸ್ಥೆ ಮಾಡುವಂತೆ ಹೇಳುತ್ತಿದ್ದಳು. ನಾನು ದಿಙ್ಮೂಢನಾದೆ. ಸನ್ನಿವೇಶವೆಂತಹುದು? ನನಗೆ ತಿಳಿದಿದ್ದ ಒಂದೇ ದಾರಿ, ಮನೆಯಿಂದ ಓಡಿ ಹೋಗುವುದು. ಅದನ್ನೇ ಕಾರ್ಯರಂಗಕ್ಕೂ ತಂದಿದ್ದಾಯಿತು.

ನಾವು—ಪಟ್ಟಣವನ್ನು ಸೇರಿ ಹಲವಾರು ದಿನಗಳನ್ನು ಸುಖವಾಗಿ ಕಳೆದೆವು. ಕೈಲಿದ್ದ ಹಣ ಕ್ರಮೇಣ ವ್ಯಯವಾಗುತ್ತ ಬಂದಿತು. ಕೆಲಸಕ್ಕೆಂದು ಅಲೆದಲೆದು ಸಾಕಾಯಿತು. ದಿನಪತ್ರಿಕೆಯೊಂದರಲ್ಲಿ ಹುಡುಗಿಯರ ಶಾಲೆಯೊಂದಕ್ಕೆ ಶಿಕ್ಷಕಿಯೋರ್ವಳು ಬೇಕಾಗಿರುವಳೆಂದು ಪ್ರಕಟವಾಗಿದ್ದಿತು. ನಿನ್ನ ತಾಯಿ ಆ ಕೆಲಸಕ್ಕೆ ಸೇರುವೆನೆಂದಳು. ಆದರೆ ಪತ್ನಿಯ ಹಣದಿಂದ ಜೀವಿಸಲು ನನಗೆ ಮನ ಬಾರಲಿಲ್ಲ. ಗತ್ಯಂತರವಿಲ್ಲ; ಕೊನೆಗೆ ನನ್ನ ಅನುಮತಿಯನ್ನು ಪಡೆದು ಅವಳು ಕೆಲಸಕ್ಕೆ ಸೇರಿದುದೂ ಆಯಿತು. ನಿನ್ನ ತಾಯಿಗೆ ಕೆಲಸಕ್ಕೆ ಸೇರಿದ ಹಲವಾರು ದಿನಗಳಲ್ಲಿಯೇ ನನಗೂ ಅಂಗಡಿಯೊಂದರಲ್ಲಿ ಕೆಲಸ ದೊರೆತುದು ಆಶ್ಚರ್ಯದ ಸಂಗತಿಯೇ ಸರಿ.

ಎರಡು ವರ್ಷಗಳು ಸಂದಿರಬಹುದು. ದಿನಕಳೆದಂತೆಲ್ಲಾ ನಿನ್ನ ತಾಯಿಯ ಸ್ವಭಾವದಲ್ಲಿ ಹಲವಾರು ಮಾರ್ಪಾಟುಗಳು ಕಂಡುಬಂದುವು. ಬರಬರುತ್ತ ಮೌನಿಯಾದಳು; ನನ್ನೊಡನೆ ಹೆಚ್ಚು ಸಂಭಾಷಿಸುತ್ತಿರಲಿಲ್ಲ. ಅವಳ ಆರೋಗ್ಯವೂ ಕೆಡುತ್ತ ಬಂದಿತು. ಮೊದಲು ಮೊದಲು ಅವಳ ವಿಚಿತ್ರ ವರ್ತನೆಗೆ ಕಾರಣ ನನಗೆ ಹೊಳೆಯಲಿಲ್ಲ. ಬಳಿಕೊಂದು ದಿನ ತಿಳಿಯಿತು. ನಿನ್ನತಾಯಿ ಹಲವಾರು ದಿನಗಳಲ್ಲಿ ತಾಯಿಯಾಗುವಳೆಂದು. ನನಗೆ ಸಂತೋಷವೇನೋ ಆಯಿತು, ಆದರೆ ಅವಳ ನಿರ್ಬಲತೆ ನನ್ನ ಮನಸ್ಸಿನ ದುಗುಡವನ್ನು ಹೆಚ್ಚಿಸಿತು.

ತಿಂಗಳುಗಳುರುಳಿದುವು. ನಮ್ಮ ಸಂಸಾರದಲ್ಲಿ ಬಹಳ ಬದಲ್ಲಾವಣೆಗಳಾಗಿದ್ದುವು. ಎಂತಹ ದುಃಖಮಯದಿನಗಳಿವು! ನಿನ್ನ ತಾಯಿಯ ಮನಮೋಹಕ ರೂಪು, ಅವಳ ಬಲ, ಹಾಸ್ಯ— ಎಲ್ಲವೂ ಮಾಯವಾಗಿದ್ದುವು. ಅವುಗಳ ತಾಣದಲ್ಲಿ ದುಃಖ, ನಿರ್ಬಲತೆಗಳು ತಲೆಹಾಕಿದ್ದುವು. ಅದರೂ ತನ್ನ ಆರೋಗ್ಯದ ಕಡೆಗೆ ನಿನ್ನ ತಾಯಿ ಗಮನ ಕೊಡಲಿಲ್ಲ. ನನ್ನೊಡನೆ ಬಹಳ ವಿರಳವಾಗಿ ಸಂಭಾಷಿಸುತ್ತಿದ್ದಳು. ನಮ್ಮಿಬ್ಬರ ನಡುವಿದ್ದ ತಪ್ಪು ಭಾವನೆ ಏನೆಂದು ನನಗೆ ತಿಳಿಯಲಿಲ್ಲ.

ನನ್ನ ಸತ್ಯ, ನಿಷ್ಠೆಗಳು ನಾನು ಕೆಲಸ ಮಾಡುತ್ತಿದ್ದ ಅಂಗಡಿಯ ಒಡೆಯನಿಗೆ ವೇದ್ಯವಾಗಿದ್ದುವು. ಆದರೆ ಆದರಿಂದ ನನ್ನ ಕೆಲಸ ಕಡಮೆಯಾಗಲಿಲ್ಲ, ಇನ್ನೂ ಹೆಚ್ಚಿತು. ಅಂಗಡಿಯ ಕೆಲಸದ ಜತೆಗೆ ಒಡೆಯನ ಮಕ್ಕಳನ್ನು ಸಾಯಂಕಾಲದ ವೇಳೆ, ಆಡ್ಡಾಡಲು ಕರೆದುಕೊಂಡು ಹೋಗುವ ಕೆಲಸವೂ ನನಗೇ ಒಪ್ಪಿಸಲ್ಪಟ್ಟಿತು. ಎಷ್ಟೋ ದಿನಗಳು ಮನೆಗೆ ವೇಳೆಮೀರಿ ಹಿಂತಿರುಗುತ್ತಿದ್ದೆ. ಅಂತಹ ಅವೇಳೆಯಲ್ಲಿ ಬರುವಪತಿಯನ್ನು ಯಾವ ಪತ್ನಿ ತಾನೇ ನಗುನಗುತ್ತ ಸ್ವಾಗತಿಸಿಯಾಳು?

ಹೆರಿಗೆಗೆ ಇನ್ನೂ ಎರಡು ತಿಂಗಳುಗಳಿದ್ದುವು. ದಿನೇ ದಿನೇ ನಿನ್ನ ತಾಯಿಯ ದೇಹಶಕ್ತಿ ಕ್ಷಯಿಸುತ್ತ ಬಂದಿತು. ವೈದ್ಯನನ್ನು ಕರೆಯುವ ಎಂದರೆ ಬೇಡವೆಂದಳು. ಯಾವ ವಿಷಯವನ್ನು ಕುರಿತೂ ನನ್ನೊಡನೆ ಚರ್ಚಿಸುತ್ತಿರಲಿಲ್ಲ. ಬಿಲ್ಲನ್ನು ನಾಚಿಸುತ್ತಿದ್ದ ಆ ಹುಬ್ಬು, ಕೆಂಪಡರಿದ ಕದಪುಗಳು, ಕೆಂದುಟಿಗಳು ಎಲ್ಲವೂ ಮಾಯವಾದುವು. ನಾ ನನ್ನ ಬಾಳಿಗೆ ಆಸೆ ದೀಪ್ತಿಗಳನ್ನು ತರುವ ಆ ಸುದಿನವನ್ನು ಎದುರು ನೋಡುತ್ತಿದೆ. ಹಲವಾರು ಬಾರಿ ಆದಿನ ಬಾರದೇನೋ ಎಂದು ಹೆದರಿದೆ.

ಹೆರಿಗೆಗೆ ಸುಮಾರು ೧೫ ದಿನಗಳಿರಬಹುದು. ನಿನ್ನ ತಾಯಿ ಹೊರಳಾಡುತ್ತ ಹಾಸಿಗೆಯ ಮೇಲೆ ಮಲಗಿದ್ದಳು. ಅವಳ ಬಳಿಹೋಗಿ ನಿಂತೆ. ನನ್ನ ಕಡೆಗೆ ತಿರುಗಿದಳು. ಅವಳು ನನ್ನನ್ನು ದಿಟ್ಟಿಸಿ ಎಷ್ಟೋ ದಿನಗಳಾಗಿದ್ದುವು. ತನ್ನನ್ನೆತ್ತಿ ಕೂರಿಸುವಂತೆ ನನ್ನನ್ನು ಪ್ರಾರ್ಥಿಸಿಕೊಂಡಳು. ಅವಳ ದೇಹವನ್ನು ಮೇಲೆತ್ತಿ ನನ್ನ ದೇಹಕ್ಕಾನಿಸಿಕೊಂಡೆ. ಕನವರಿಸುತ್ತಿದ್ದಂತೆ ಮಾತನಾಡಲು ತೊಡಗಿದಳು "ಸೌಖ್ಯವಾಗಿದ್ದೀರೇನು" ಮಾತಾಡಲು ನನಗೆ ಬಾಯೇ ಬರಲಿಲ್ಲ. "ನೀವು ಸದಾ ಸೌಖ್ಯದಿಂದಿರುತ್ತೀರಿ ಎಂದು ನಂಬಿದ್ದೇನೆ" "ಏಕೆ . . . ಏತಕ್ಕೋಸುಗ," ನಾನೆಂದೆ. "ನನ್ನ ಮಗುವಿನ ಲಾಲನೆ ಪಾಲನೆಗೆ" "ಎಚ್ಚರವಾಗಿರುವಿಯೇನು . ." "ಎಚ್ಚರವಾಗಿದ್ದೇನೆ . . . ಸತ್ಯವಾಗಿಯೂ ಎಚ್ಚರವಾಗಿದ್ದೇನೆ" "ನೀನು ಏನು ಹೇಳುತ್ತಿರುವಿಯೋ ಅದು ನನಗೆ ಸರಿಯಾಗಿ ತಿಳಿದಿಲ್ಲ" ಮೆಲ್ಲಗೆ ಹೇಳಿದೆ. ಮಾತಾಡಲು ತ್ರಾಣವಿಲ್ಲದೆ ನಿಟ್ಟುಸಿರು ಬಿಡುತ್ತಿದ್ದಳು. ಗುಟ್ಟು ಇನ್ನೂ ಹೊರಬಿದ್ದಿರಲಿಲ್ಲ. ಮೌನವಾಗಿರುವುದೇ ಒಳ್ಳೆಯದೆಂದು ನಾನು ತೆಪ್ಪಗೆ ಕುಳಿತೆ. ಬಹಳ ಹೊತ್ತು ಇಬ್ಬರೂ ನೀರವವಾಗಿಯೇ ಕುಳಿತಿದ್ದೆವು. ಅವಳ ತೋಳಿನ ಮೇಲೆ ನನ್ನ ಕಣ್ಣುಗಳಿಂದ ಹನಿಗಳುರುಳಿದುವುಮುಖವನ್ನು ಮೇಲೆತ್ತಿ ನನ್ನ ಕೆನ್ನೆಗಳ ಮೇಲೆ ಹರಿದಿದ್ದ ನೀರಿನ ಕೋಡಿಯನ್ನು ಕಂಡಳು ನಿನ್ನ ತಾಯಿ. ಕಣ್ಣೀರನ್ನೊರೆಸಿ ಬಹಳ ಕಷ್ಟದಿಂದ ಮಾತನಾಡಿದಳು "ನನಗೆ ತಿಳಿದಿದೆ ನೀವು ನನ್ನನ್ನು ಪ್ರೇಮಿಸುತ್ತೀರೆಂದು, ಆದರೆ ನೀವು ನನಗೆ ತೋರಿದ ಅನಾದರಣೆನನ್ನನ್ನು ನಿರ್ಬಲಳನ್ನಾಗಿ ಮಾಡಿತು; ನನ್ನ ಪ್ರಾಣವನ್ನೇ ತಿಂದಿತು. ವಿಷಯದ ಪ್ರಲೋಭಕ್ಕೆ ಒಳಗಾದಿರಿ; ನನ್ನನ್ನು ಮರೆತಿರಿ." ಇದನ್ನುಕೇಳಿನನ್ನ ಆಶ್ಚರ್ಯ ಮೇರೆ ಮೀರಿತ್ತು. ಶಿಲಾಮೂರ್ತಿಯಂತೆ ಕುಳಿತೆ.

"ನಾನು ಸುಂದರವಾಗಿಲ್ಲವೇ"

ಆಶ್ಚರ್ಯದಿಂದ ವಿಮುಕ್ತನಾಗಿ ನಾನೆಂದೆ "ಸುಂದರ? . . . ಕಾಮನ ಬಿಲ್ಲಿನ ವಿವಿಧ ಬಣ್ಣಗಳ ಸಂಪೂರ್ಣ ಕಾಂತಿಯೂ ನಿನ್ನ ಸೌಂದರ್ಯಕ್ಕೆ ಸಾಟಿಯಲ್ಲ."

"ನಾನು ನಿಮ್ಮನ್ನು ಪ್ರೇಮಿಸುತ್ತಿಲ್ಲವೇನು" "ಅದನ್ನು ನಾನು ಹೇಳಬಾರದು. ನನ್ನ ಮೇಲಿರುವ ನಿನ್ನ ಪ್ರೇಮವನ್ನು ಬಣ್ಣಿಸಿದರೆ ಅದು ನಿಸ್ಸಾರವಾಗುತ್ತದೆ."

"ನಾನು ನಿಮಗೆ ವಿಧೇಯಳಾಗಿಲ್ಲವೇನು"

"ನನಗೆಂದೂ ನೀನು ಎದುರುತ್ತರವನ್ನು ಕೊಟ್ಟುದಿಲ್ಲ." "ಹಾಗಿದ್ದರೆ ನನ್ನನ್ನೇಕೆನೀವು ತೊರೆದಿರಿ" ಹಿಂದಿನಿಂದ ಯಾರೋ ಚಾಟಿ ಕೋಲಿನಿಂದ ತಿವಿದಂತಾಯಿತು. ಕಿರಿಚಿದೆ ನೀನು ಹೇಳುತ್ತಿರುವುದಾದರೂ ಏನು."

"ಈಗ ನನ್ನದೆಂದು ಹೇಳಿಕೊಳ್ಳಲು ನನಗುಳಿದಿರುವುದು ಸಾವು ಮಾತ್ರ. ನಿಜವಾಗಿಯೂ ಹೇಳಿ ಆಕೆ . . . ಆಕೆ . . . ನಿಮ್ಮ ಉಪಪತ್ನಿ ನನಗಿಂತಲೂ ಚೆನ್ನಾಗಿದ್ದಾಳೆಯೇ? . . . ಒಂದಾನೊಂದು ಕಾಲದಲ್ಲಿ ನನ್ನ ಸೌಂದರ್ಯವನ್ನು ಮನಸಾರೆ ಹೊಗಳುತ್ತಿದ್ದಿರಿ. ನನ್ನ ಸ್ವರ ಮಧುರ ಸಂಗೀತಕ್ಕಿಂತಲೂ ಹಿತವಾಗಿತ್ತು. ನನ್ನ ಸಂಪರ್ಕ ಸಗ್ಗವೆನಿಸಿತ್ತು ಆದರೆ ಅದೇ ನಾನು-ನಾನು ಇಂದು ರಕ್ತಮಾಂಸಗಳ ಒಂದು ಮುದ್ದೆ. ನನ್ನನ್ನು ಬದಿಗಿರಿಸಿದಿರಿ. ಮತ್ತೊಬ್ಬಳು ನಿಮ್ಮ ಮನವನ್ನು ಸೂರೆಗೊಂಡಳು. ನಿಮ್ಮ ಆ ವರ್ತನೆ ನನ್ನೆದೆಗೆ ಅಂಬಿನಂತೆ ನಾಟಿತು. ಜೀವಿಸಿರುವುದಕ್ಕಿಂತಲೂ ಸಾಯುವುದೇ ಮೇಲೆನ್ನಿಸಿತು. ತನ್ನ ಮನೆ ತಂದೆತಾಯಿಗಳು, ಊರು—ಎಲ್ಲವನ್ನೂ ನಿಮಗೋಸುಗ ತೊರೆದ ನನ್ನ ಸ್ಮೃತಿ ಇಷ್ಟುಬೇಗ ಮರೆತುಹೋಯಿತೇನು? ತನ್ನ ಮಾನವನ್ನೂ ಸಹ ಲೆಕ್ಕಿಸದೆ ನಿಮ್ಮೊಡನೆ ಓಡಿಬಂದ ಹೆಂಗಸಿನ ಜ್ಞಾಪಕವಿದೆಯೇ? ಹೇಳಿ . . . ಹೇಳಿ . . . ಯಾರು? . . . ನೀವು ಪ್ರತಿದಿನವೂ ಉದ್ಯಾನವನಗಳಲ್ಲಿ ಅವಳ ಜತೆಯಲ್ಲಿ ನಲಿದಾಡುವಿರಲ್ಲ. ಆಕೆ ಯಾರು? ಸಾಯುತ್ತಿರುವ—ನಿಮಗಾಗಿ ಸಾಯುತ್ತಿರುವ ನಿಮ್ಮ ಪತ್ನಿಯ ಮೇಲೆ ಕರಣೆಯಿಡಿ."

ತುಸು ಹೊತ್ತು ಮೂಕನಾಗಿ ಕುಳಿತೆ. ನನ್ನ ದುರ್ವರ್ತನೆಗೆ ಹೇಸಿ,ಮರುಗುವೆನೆಂದು ನಿನ್ನ ತಾಯಿ ನನ್ನ ಮೊಗದ ಕಡೆ ನೋಡಿದಳು. ಆದರೆ ಅಂತಹ ಪಾಪ ಕಾರ್ಯವನ್ನೆಂದೂ ನಾನು ಮಾಡಿದುದಿಲ್ಲ. ಇದ್ದಕ್ಕಿದ್ದಂತೆಯೇ ಒಂದು ಯೋಚನೆ ನನಗೆ ಸ್ಫುರಿಸಿತು. ಗಟ್ಟಿಯಾಗಿ ನಗಲು ಪ್ರಾರಂಭಿಸಿದೆ. ನನ್ನ ಪತ್ನಿಯ ಮುಂಗುರುಳುಗಳನ್ನು ಹಿಂದಕ್ಕೆ ತೀಡಿ, ಅವಳನ್ನು ಬಿಗಿಯಾಗಿ ಎದೆಗಪ್ಪಿಕೊಂಡೆ. ಕೊನೆಗೆ ಹೇಳಿದೆ" ಎಂತಹ ತಪ್ಪು ಭಾವನೆಯಿಂದ ಇಷ್ಟು ದಿನಗಳೂ ನರಳುತಿದ್ದೆ ಮನೋರಮ. . . . ನನ್ನ ಜತೆಯಲ್ಲಿ ಪಾರ್ಕುಗಳಲ್ಲಿ ತಿರುಗಾಡಲು ಬರುವ ಹುಡುಗಿ ನನ್ನ ಮಾಲೀಕರ ಮಗಳು. ಆಕೆ ಒಡತಿ, ನಾನು ಸೇವಕ. . . ಅಷ್ಟಲ್ಲದೆ ಮತ್ತಾವ ಸಂಬಂಧವೂ ನಮ್ಮಿಬ್ಬರ ನಡುವೆ ಇಲ್ಲ. ಇರಲಿ, ಒಂದು ದಿನ ಆಕೆಯನ್ನೇ ಇಲ್ಲಿಗೆ ಕರೆತರುತ್ತೇನೆ. ನಿನ್ನ ಸಂಶಯವನ್ನು ಹೋಗಲಾಡಿಸಿಕೊಳ್ಳುವಿಯಂತೆ". ಅದಕ್ಕಿಂತಲೂ ಹೆಚ್ಚಾಗಿ ನನ್ನಿಂದ ಮಾತಾಡಲಾಗಲಿಲ್ಲ. ನಾನು ಹೇಳಿದ ಸತ್ಯ ಅವಳಿಗೆ ಅತ್ಯಾಶ್ಚರ್ಯವಾಗಿ ಕಂಡು ಬಂದಿತು. ಅವಳ ಕುರುಡು ನಂಬಿಕೆ ಅವಳನ್ನು ನಿರಾಶೆಯ ತುದಿಗೆ ಎಳೆದೊಯ್ದಿತ್ತು.

"ನಿಜವೇನು? ನಾನು ನಂಬಲೇನು?" ಎಂದು ಕೇಳಿದಳು ಬಹಳ ಹೊತ್ತಿನ ಬಳಿಕ.

"ಸತ್ಯ ಮನೋರಮ . . . ನನ್ನಾಣೆಗೂ ಸತ್ಯ".

"ಕ್ಷಮಿಸಿ . . . ನನ್ನನ್ನು ಕ್ಷಮಿಸಿ" ಎಂದಳು ಕಣ್ಣೀರುಹಾಕುತ್ತ. "ಕ್ಷಮಿಸುವ ಪ್ರಮೇಯವಿಲ್ಲ. ಮನೋರಮ, ಪ್ರತಿಯೊಬ್ಬ ಪತ್ನಿಗೂ ತನ್ನ ಪತಿಯ ಮೇಲೆ ಯಾವದಾದರೂ ಒಂದು ವಿಷಯದಲ್ಲಿ ಸಂಶಯವಿರುವುದು ಸಹಜವೇ ಎಂದು ಸಮಾಧಾನ ಪಡಿಸಿದೆ. ತೃಪ್ತಿಯ ನಗುವೊಂದು ನಿನ್ನ ತಾಯಿಯ ಮುಖದ ಮೇಲೆ ಮಿಂಚಿತು. ಅವಳ ಕಣ್ಣುಗಳಿಗೆ ಹೊಸ ಬೆಳಕು ಬಂದಿತು. ನನ್ನನ್ನೊಮ್ಮೆ ಚುಂಬಿಸಿ ಕೇಳಿದಳು, ನನ್ನನ್ನು ನೀವು ಸದಾ ಪ್ರೀತಿಸುತ್ತಿರುವಿರಲ್ಲವೇ". ನಾನೆಂದೆ" ನನ್ನ ಜೀವವಿರುವವರೆಗೂ ನಿನ್ನನ್ನು ಪ್ರೀತಿಸುತ್ತಿರುತ್ತೇನೆ, ನನ್ನ ಪ್ರಿಯ ಪುತ್ಥಳಿ."

ನಿನ್ನ ತಾಯಿಯೊಡನೆ ನಾನಾಡಿದ ಕೊನೆಯ ಮಾತುಗಳಿವು. ಕೃಶಿಸಿ, ನಶಿಸಿ, ನೊಂದಿದ್ದ ಅವಳಜೀವ ನಿನ್ನಹೆರಿಗೆಯ ಹಲವಾರುದಿನಗಳ ಬಳಿಕ ಶಾಂತಿಯನ್ನು ಪಡೆಯಿತು. ನನ್ನಿಂದ, ನಿನ್ನಿಂದ ದೂರವಾದಳು ನನ್ನ ಮನೋರಮ.

ಅವಳ ಮರಣದ ತರುವಾಯ ನನಗೆ ಜೀವಿಸಿರಲು ಬೇಸರವೆನಿಸಿತು. ನನ್ನ ಶಾಂತಿ ಮಾಯವಾಯಿತು. ನನ್ನ ಬಾಳಿನ ಸುಖದುಃಖಗಳಲ್ಲಿ ಭಾಗಿಯಾಗಿದ್ದ ಮನೋರಮಳ ನಿರ್ಗಮನದೊಡನೆ ನನ್ನ ಆಸೆ, ಸೌಖ್ಯಗಳೂ ಮಾಯವಾದುವು. ಆತ್ಮಹತ್ಯೆಮಾಡಿಕೊಳ್ಳಲು ಯೋಚಿಸಿದೆ. ಆದರೆ ನಿನ್ನ ನೆನಪಾಯಿತು. ನಿನ್ನ ತಾಯಿಗೆ ನಿನ್ನ ಮೇಲಿದ್ದ ಪ್ರೇಮದರಿವಾಯಿತು. ನಿನಗೋಸುಗ ಜೀವದಿಂದುಳಿದೆ. ನನ್ನಿಂದ ನೀನು ಪಡೆದಿರುವುದು ನನ್ನ ರೂಪು ಮಾತ್ರ. ಆದರೆ ನಿನ್ನ ತಾಯಿಯ ಪ್ರೇಮ, ಸತ್ಯ, ಕರುಣೆ— ಎಲ್ಲವೂ ನಿನ್ನಲ್ಲಿ ಅಡಕವಾಗಿವೆ. ಆಗಲೇ ಬಹಳ ಹೊತ್ತಾಯಿತಪ್ಪ. ಇನ್ನು ಮಲಗು. ನಿನ್ನ ತಾಯಿಯನ್ನು ನೆನೆಸಿಕೊಂಡು ನಿದ್ರಿಸು."

ಆದರೆ ನನ್ನ "ಮುದ್ದುಮಣಿ" ಆಗಲೇ ನಿದ್ದೆಯಲ್ಲಿ ಲೀನವಾಗಿದ್ದ. ಅವನ ದೇಹದಮೇಲೆ ಹೊದ್ದಿಕೆಗಳನ್ನೆಳೆದು, ಬೀರುವನ್ನು ಸಮೀಪಿಸಿದೆ. ಒಂದು ಪುಸ್ತಕವನ್ನು ಹೊರಗೆಳೆದು ಅದರ ಮೇಲಿಡಿದಿದ್ದ ಧೂಳನ್ನು ಕೊಡವಿದೆ. ಕಿಟಕಿಯ ಬಳಿ ಹೋಗಿ ನಿಂತೆ. ಕಾರ್ಮೋಡಗಳು ಬಾನಿನಲ್ಲಿ ಕವಿದಿದ್ದುವು. ಕುಳಿರ್ಗಾಳಿ ಬೀಸುತ್ತಿತ್ತು. ಪುಸ್ತಕವನ್ನು ತೆರೆದೆ. ಅದರಲ್ಲಿ ನನ್ನ ಪ್ರಿಯಪತ್ನಿ ಬರೆದಿದ್ದ ಅಕ್ಷರಗಳು ಗೋಚರಿಸಿದುವು" ಬಡವಳಾದ ನಾನು ಅವರಿಗೇನು ತಾನೇ ಕೊಡಬಲ್ಲೆ— ನನ್ನಹೃದಯ, ನನ್ನ ಪ್ರೀತಿಯ ಪುತ್ರನನ್ನು ಅವರಿಗೆ ಅರ್ಪಿಸಿದ್ದೇನೆ. " ಕೆನ್ನೆಯ ಮೇಲಿಂದ ಕಣ್ಣೀರುರುಳಿ ಅಕ್ಷರಗಳ ಮೇಲೆ ಬಿತ್ತು. ಟಪ, ಟಪನೆ ಹನಿಗಳು ಉದುರಲಾರಂಭಿಸಿದುವು. ತಿಮಿರವೇ ಮೂರ್ತಿವೆತ್ತು ಮುಂದೆ ನಿಂತಿತ್ತು. ಮಿಂಚೊಂದು ಮಿನುಗಿತು. ಕತ್ತೆತ್ತಿದೆ. ಮನೋರಮಳ ಸುಂದರವದನ ನನ್ನನ್ನೇ ದಿಟ್ಟಿಸುತ್ತಿತ್ತು. ಕಣ್ಮುಚ್ಚಿ ಹಾಡಿದೆ "ಕರುಣಾಳು ಬಾ, ಬೆಳಕೆ, ಮುಸುಕಿದೀ ಮಬ್ಬಿನಲಿ, ಕೈಹಿಡಿದು ನಡೆಸೆನ್ನನು."

*ಒಂದು ಇಂಗ್ಲೀಷ ಕತೆಯ ಅನುವಾದ.

# ದೇಶಾಂತರಗಳಿಂದ

## ಜಪಾನಿನಲ್ಲಿ ಭೂಕಂಪ

ಭೂಕಂಪದ ಪರಿಣಾಮವಾಗಿ ಎದ್ದ ತೆರೆಗಳಿಂದ ... ೬೪ ಸಾವಿರ ಜನಸಂಖ್ಯೆಯುಳ್ಳ ಫ್ಯೂಕ್ಯೂಯಿ ಎಂಬ ಜಪಾನಿನ ಪಟ್ಟಣವೊಂದು ತೊಳೆದು ಹೋಗಿರುವದೆಂದು ಬಾನುಲಿಯ ವರದಿಯಿಂದ ತಿಳಿಯುತ್ತದೆ. ಫ್ಯೂಕ್ಯೂಯಿ ಪಟ್ಟಣವು ರೇಶಿಮೆಯ ಉದ್ಯೋಗದ ನಗರವಾಗಿದ್ದು ಜಪಾನಿ ಮುಖ್ಯ ನಡುಗಡ್ಡೆ ಹೊನ್‌ಶ್ಯೂವಿನ ಪಡುಗಡಲ ತೀರದಲ್ಲಿದೆ. ಅದರೆ ಇತರ ವರದಿಗಳಿಂದ ನಗರವು ೩ ನೆಯ ಒಂದಂಶದಷ್ಟು ಮಾತ್ರ ಹಾಳಾಗಿದೆಯೆಂದು ತಿಳಿಯುತ್ತದೆ. ಎರಡು ಪ್ರಯಾಣಿಕರ ಬಂಡಿಗಳು ಅಪಾಯಕ್ಕೀಡಾಗಿರಬೇಕೆಂದು ಊಹಿಸಲಾಗಿದೆ.

ಭೂಕಂಪವು ಮಧ್ಯಜಪಾನಿನ ನಗರಗಳ ಸಾವಿರಾರು ಮನೆಮಠಗಳನ್ನು ಉರುಳಿಸಿದೆ. ಸಾವಿರಕ್ಕಿಂತಲೂ ಹೆಚ್ಚು ಜನರು ಸಾವಿಗೆ ತುತ್ತಾಗಿದ್ದು ೧೦ ಲಕ್ಷ ಜನರು ಮನೆಗಳನ್ನು ಕಳೆದುಕೊಂಡು ತಿರುಗುವಂತಾಗಿದೆ. ಅನೇಕ ಪಟ್ಟಣಗಳು ನೆಲಸಮವಾಗಿವೆಯೆಂದೂ ವರದಿಯಿದೆ.

## ರಶಿಯದಲ್ಲಿ ಹೊಸ ವಿಧದ ಯುದ್ಧ ವಿಮಾನಗಳು

ರಶಿಯದ ವಿಮಾನದ ರಚಕರಲ್ಲಿ ಅನೇಕರಿಗೆ ಸ್ಟಾಲಿನ್ ಪಾರಿತೋಷಕ ದೊರೆತಿದೆ. ಅವರು ಹೊಸ ಹೊಸ ಬಗೆಯ ಯುದ್ಧ ವಿಮಾನಗಳ ನಕ್ಷೆಯನ್ನು ತಯಾರಿಸಿಕೊಟ್ಟಿದ್ದಾರೆ.

ಜೆಟ್ ಎಂಜಿನ್ ಮತ್ತು ಹೊಸ ವಿಧದ ಟ್ಯಾಂಕುಗಳನ್ನೂ ಯುದ್ಧ ನೌಕೆಗಳನ್ನೂ ರಚಿಸಿದ್ದಕ್ಕೂ ಸ್ಟಾಲಿನ್ ಬಹುಮಾನಗಳು ದೊರೆತಿವೆ.

ಸುಮಾರು ೮೪ ಲಕ್ಷ ರೂಬಲ್ಲಿನಷ್ಟು ಹಣವು ೪೭೫ ಜನ ವಿಜ್ಞಾನಿಗಳಿಗೆ ಬಹುಮಾನವಾಗಿ ದೊರೆತಿದೆ. ೧೦ ಜನರಿಗಂತೂ ಒಬ್ಬೊಬ್ಬರಿಗೆ ೧೫ ಲಕ್ಷ ರೂಬಲ್ಲಿನ ಇನಾಮು ಸಿಕ್ಕಿದೆ. ಅನೇಕ ಬಹುಮಾನಗಳು ೫–೬ ಜನರಿಗೆ ಒಟ್ಟಾಗಿ ಕೊಡಲಾದವು. ಯಾಕ್ ಫೈಟರ್ ವಿಮಾನವನ್ನು ಕಂಡುಹಿಡಿದ ಅಲೆಗ್ಸಾಂಡರ್ ಯಾಕೊಲೇವನಿಗೆ ೮ ನೆಯ ಸಲ ಸ್ಟಾಲಿನ್ ಬಹುಮಾನ ಸಿಕ್ಕಿದೆ. ಅದು ಒಂದು ಹೊಸ ಬಗೆಯ ಯುದ್ಧ ವಿಮಾನ. ಅತಂ ಮಿಕೊಯಾನ್ ಮತ್ತು ಮಿಕಾಯಿಲ ಗುರೋವಿಕ್ ಎಂಬವರಿಗೆ ಪ್ರಥಮ ಬಹುಮಾನವು ೨ ನೆಯ ಸಲ ದೊರೆತಿದೆ.

ಲಂಡನ್ ವಿಶ್ವವಿದ್ಯಾನಿಲಯದ ಕುಲಪತಿಗಳಾದ ಅರ್ಲ್ ಆಫ್ ಅತ್ಲೋನರು ರಾಯಲ್ ಅಲ್ಬರ್ಟ್ ಮಂದಿರದಲ್ಲಿ ನಡೆದ ಪದವೀದಾನ ಸಮಾರಂಭದಲ್ಲಿ ಬ್ರಿಟಿಶ್ ವೆಸ್ಟ್ ಇಂಡೀಸಿನ ಫ್ಲೋರಾ ರಾಸಳಿಗೆ ಪದವಿ ಪತ್ರವನ್ನು ಕೊಟ್ಟು ಅವಳ ನಮಸ್ಕಾರವನ್ನು ಸ್ವೀಕರಿಸುತ್ತಿರುವುದು.

ಒಂದು ವರ್ಷದ ಪೂರ್ವದಲ್ಲಿ ಇಂಥದೇ ಒಂದು ಭೂಕಂಪವು ಸಾವಿರ ಜನರನ್ನು ಕೊಂದಿತ್ತಲ್ಲದೆ ಅಷ್ಟೇ ಜನರನ್ನು ಗಾಯಗೊಳಿಸಿತ್ತು.

ಭೂಕಂಪದ ಕೇಂದ್ರ ಸ್ಥಾನವು ನಾಗೋಯಿಯಿಂದ ಈಶಾನ್ಯಕ್ಕೆ ೨೦ ಮೈಲುಗಳ ದೂರದಲ್ಲಿದೆ. ಅಲ್ಲಿ ಬೆಂಕಿಯು ಉರಿಯೇಳುತ್ತದೆಂದು ... ಕ್ಯೂಯಿಯಿಂದ ಬಂದ ವರದಿಗಳಿಂದ ತಿಳಿ...ದೆ.

## ಅಂತಾರಾಷ್ಟ್ರೀಯ ಕೂಲಿಕಾರ ಸಂಘ

ಸಾನ್ ಫ್ರಾನ್ಸಿಸ್ಕೋದಲ್ಲಿ ನಡೆಯುತ್ತಿರುವ ಅಂತಾರಾಷ್ಟ್ರೀಯ ಕೂಲಿಕಾರ ಸಂಘದ ಪರಿಷತ್ತಿಗೆ ಭಾರತದ ಪ್ರತಿನಿಧಿ ಮುಖಂಡರಾಗಿ ರಾಷ್ಟ್ರೀಯ ಮಜೂರ ಸಂಘದ ಅಧ್ಯಕ್ಷರಾದ ಶ್ರೀ ಹರಿಹರನಾಥ ಶಾಸ್ತ್ರಿಗಳು ಹೋಗಿದ್ದಾರೆ. ಅಲ್ಲಿಯ ಯೋಗ್ಯತಾ ನಿರ್ಣಯ ಸಮಿತಿಯು ಕೂಲಿಕಾರಪ್ರತಿನಿಧಿಗಳ ಸ್ಥಾನಮಾನಗಳ ಬಗ್ಗೆ ಹೊರಟ ಪ್ರತಿಭಟನೆಯನ್ನು ಪರಿಶೀಲಿಸುತ್ತಿರುವದಾಗಿ ಸುದ್ದಿಯಿದೆ. ಕೂಲಿಕಾರ ಯಂತ್ರಶಾಖೆಯ ಕಾರ್ಯದರ್ಶಿಗಳೂ ಹಿಂದೀ ಕೂಲಿಕಾರ ಸಂಘಟನೆಯ ಸರಕಾರೀ ಪ್ರತಿನಿಧಿಗಳೂ ಆದ ಶ್ರೀಲಾಲರು ಮೇಲೆ ಕಾಣಿಸಿದವರನ್ನೇ ಪ್ರತಿನಿಧಿಗಳನ್ನಾಗಿ ಕಳಿಸಿದ್ದಕ್ಕೆ ಸರಕಾರಕ್ಕಿರುವ ಸಮರ್ಥನೆಯನ್ನು ಒಂದು ಸುದೀರ್ಘ ಪತ್ರದಲ್ಲಿ ಬರೆದು ಹಾಕಿರುವದಾಗಿ ತಿಳಿಯುತ್ತದೆ.

ಮೇಲಿನ ಪ್ರತಿಭಟನೆಗೆ ಮುಖ್ಯ ಕಾರಣ ಹಿಂದುಸ್ತಾನದಲ್ಲಿ ಕಮ್ಯುನಿಸ್ಟರನ್ನು ಬಂಧನದಲ್ಲಿ ಇಟ್ಟದ್ದು. ರಾ. ಮ. ಕಾಂಗ್ರೆಸ್ಸಿನ ಪ್ರಾತಿನಿಧ್ಯ ಯೋಗ್ಯತೆಯನ್ನು ಯೋಗ್ಯತಾನಿರ್ಣಯ ಸಮಿತಿಯುಳ್ಳದೆ ಮತ್ತೂ ಆರು ರಾಷ್ಟ್ರಗಳು ಪರಿಶೀಲಿಸಿರುವದಾಗಿಯೂ ಆದರೆ ಅವುಗಳ ...ಕೆ ಇನ್ನೂ ಹೊರಬಿದ್ದಿಲ್ಲವೆಂದೂ ತಿಳಿಯುತ್ತ...

## ಪಾಲಿಸ್ತಾನದ ಪ್ರಸಂಗ

ಸಂ. ರಾ. ಸಂಘದ ಮಧ್ಯಸ್ಥ ಕೌಂಟ್ ಬರ್ನದೊತ್ತೆಯವರಿಗೆ ಸಂ. ರಾ. ಸಂಘದ ನಿರೀಕ್ಷಕರು ನೆಗೆವ್, ಕೇಫರ್, ದಾರೆಮ್ ಮುಂತಾದ ಯೆಹೂದಿ ವಸತಿ ಸ್ಥಳಗಳನ್ನು ಇಜಿಪ್ತದ ಸೈನಿಕರು ದಾಳಿಗೀಡುಮಾಡಿದರೆಂದು ವರದಿಮಾಡಿದ್ದಾರೆ. ಲೇಕ್ ಸಕ್ಸೆಸ್ಸಿನ ಒಂದು ಸುದ್ದಿಯು ಇಜಿಪ್ತದ ಮಮುದಗ್ನಿಯೊಂದು ಸಂ. ರಾ. ಸಂಘದ ವಿಮಾನದ ಮೇಲೆ ಏರಿಬಂದುದನ್ನು ಪ್ರತಿಭಟಿಸಿ ಕೌಂಟರು ಭದ್ರತಾ ಮಂಡಳದ ಅಧ್ಯಕ್ಷರಿಗೆ ದೂರು ಕೊಟ್ಟಿದ್ದಾರೆ ಎಂದಿದೆ.

ಸಂ. ರಾ. ಸಂಘದ ಮೇಲ್ವಿಚಾರಣೆಯಲ್ಲಿ ಲಾರಿಗಟ್ಟಲೆ ಅನ್ನ ಮತ್ತು ಸೌದೆಗಳನ್ನು ಜೆರೂಸಲೇಮಿಗೆ ಪೂರಯಿಸಲಾಗುತ್ತಿದೆ. ತಾತ್ಕಾಲಿಕ ಶಾಂತಿಯು ಸ್ಥಾಪನೆಯಾಗಿ ನಾಲ್ಕು ವಾರಗಳು ಕಳೆದರೂ ಆಶಾದಾಯಕ ವಾತಾವರಣ ಉಂಟಾಗಿಲ್ಲ.

ಮುತ್ತಿಗೆಯ ಕಾಲದಲ್ಲಿ ನಿರ್ಗತಿಕರಾಗಿ ಸಿಕ್ಕಿಬಿದ್ದ ೧೨೦ ಅಮೇರಿಕನ್ನರನ್ನು ಜೆರೂಸಲೇಮಿನಿಂದ ಹೈಫಾಕ್ಕೆ ಒಯ್ಯಲಾಯಿತು. ಅವರನ್ನು ಅಮೇರಿಕದ ಹಡಗು ಸ್ವದೇಶಕ್ಕೆ ಸಾಗಿಸುವುದು.

ರಶಿಯ ಮತ್ತು ಇಸ್ರೇಲುಗಳ ನಡುವೆ ರಾಯಭಾರಿ ವಿನಿಮಯ ನಡೆಯಿತು. ರಶಿಯದಿಂದ ಎಂ. ಪವೇಲ್ ಐವ್ಯಾನೋವಿಚ್ ಯೆರ್‌ಶೋವನು ಇಸ್ರೇಲಿನಲ್ಲಿ ರಶಿಯದ ಮಂತ್ರಿಯಾಗಿಯೂ ಶ್ರೀಮತಿ ಗೋಲ್ಡಾ ಮೇಯರ್‌ಸನ್ನಳು ರಶಿಯದಲ್ಲಿ ಇಸ್ರೇಲಿನ ಮಂತ್ರಿಯಾಗಿಯೂ ನಿಯಮಿಸಲ್ಪಟ್ಟಿದ್ದಾರೆ

ನ್ಯೂಯಾರ್ಕಿನ ಥಾಮಸ್ ಈ. ಡ್ಯೂಯಿ

ಎಂದು ಇಸ್ರೇಲಿನ ರಾಜಧಾನಿಯಾದ ಟೆಲ್ ಅವೀವಿನಿಂದ ಪ್ರಕಟನೆ ಹೊರಟಿದೆ.

## ಡ್ಯೂಯಿಯ ನಾಮಕರಣ

ಅಮೇರಿಕದ ರಿಪಬ್ಲಿಕನ್ ಪಕ್ಷದಿಂದ ಅಧ್ಯಕ್ಷಪದದ ಉಮೇದುವಾರರಾಗಿ ನಿಂತವರಲ್ಲಿ ನ್ಯೂಯಾರ್ಕಿನ ಗವರ್ನರ ಥಾಮಸ್ ಡ್ಯೂಯಿಯು ಪಕ್ಷ ಪ್ರಪಂಚದಲ್ಲಿ ವಿಜಯಿಯಾದನು. ಕಳೆದ ಹದಿನಾರು ವರ್ಷಗಳಿಂದ ಅಧಿಕಾರ ನಡೆಯಿಸುತ್ತಿದ್ದ ಡೆಮೊಕ್ರಾಟ್ರಿಕ್ ಪಕ್ಷವನ್ನು ಸೋಲಿಸಲು ಡ್ಯೂಯಿಯೇ ತಕ್ಕ ಸ್ಪರ್ಧಿಯಾಗಬಲ್ಲನೆಂದು ರಿಪಬ್ಲಿಕನ್ ಪಕ್ಷವು ಅವನನ್ನು ಆರಿಸಿತು. ಇವರೊಡನೆ ಹೆಸರು ಕೊಟ್ಟಿದ್ದ ಸಿನೇಟರ್ ಟಾಫ್ಟ ಮತ್ತು ಸ್ಟ್ಯಾಸನ್ನರಿಗೆ ಸೋಲಾಯಿತು.

ಡ್ಯೂಯಿ ಒಬ್ಬ ರಾಜಕೀಯ ಅನುಭವಿ. ಅವನ ಅನುಭವವು ವಿಸ್ತಾರವಾದುದೆಂದು ಹೇಳಲಾಗಿದೆ. ೧೯೪೦ ರ ಕನ್‌ವೆನ್‌ಶನ್ನಿನಲ್ಲಿ ಗೆದ್ದ ವೆಂಡಲ್‌ವಿಲ್ಕಿಗೆ ಇವನು ಮುಖ್ಯ ಸ್ಪರ್ಧಿ. ೧೯೪೪ ರಲ್ಲಿ ಕೇವಲ ೩೦ ಲಕ್ಷ ಓಟುಗಳು ಕಡಿಮೆಯಾಗಿ ಅಧ್ಯಕ್ಷ ಚುನಾವಣೆಯಲ್ಲಿ ಡ್ಯೂಯಿಗೆ ಸೋಲೂ ರೂಸ್ವೆಲ್ಟರಿಗೆ ಗೆಲುವೂ ಲಭಿಸಿದವು. ನ್ಯೂಯಾರ್ಕಿನ ಗವರ್ನರಗಿರಿಯಲ್ಲಿ ಡ್ಯೂಯಿಯ ಬಗ್ಗೆ ದೋಷಾರೋಪ ಮಾಡುವ ಒಂದು ವ್ಯಕ್ತಿಯೂ ಸಿಗದು; ಅವನ ಆಡಳಿತ ಅಷ್ಟು ನ್ಯಾಯಬದ್ಧವಾಗಿತ್ತು.

ಹೆನ್ರಿ ವ್ಯಾಲೇಸರ ತೃತೀಯ ಪಕ್ಷ ಸ್ಥಾಪನೆಯಿಂದಲೂ ಸದ್ಯದ ಡೆಮೊಕ್ರ್ಯಾಟಿಕ್ ಆಳಿಕೆಯ ಅಸಾಮಂಜಸ್ಯದಿಂದಲೂ ಡೆಮೊಕ್ರ್ಯಾಟರಿಗೆ ವಿಜಯ ದುರ್ಲಭವೆಂದು ಕೆಲವರ ತರ್ಕ.

## ಸೋವಿಯಟ್ ಸೇನಾಧಿಕಾರಿಯ ಬಂಧನ !

ಬರ್ಲಿನ್ನಿನ ಅಮೇರಿಕದ ವಲಯದಲ್ಲಿ ಅತಿ ವೇಗದಿಂದ ಕಾರು ಬಿಟ್ಟಿದ್ದಕ್ಕಾಗಿ ಸೋವಿಯಟ್ ಮಿಲಿಟರಿ ಗವರ್ನರ ಮಾರ್ಶಲ್ ಸೊಕೊಲೋವಸ್ಕಿಯನ್ನು ೩೦ ನಿಮಿಷಗಳ ಕಾಲ ಅಮೇರಿಕದ ಸೇನಾಧಿಕಾರಿಯು ಬಂಧನದಲ್ಲಿಟ್ಟು ಅನಂತರ ಬಿಡುಗಡೆ ಮಾಡಿದನು. ಈ ಸುದ್ದಿ ಮುಟ್ಟಿದ ಕೂಡಲೆ ಅಮೇರಿಕದ ಜನರಲ್ ಕ್ಲೇ ಮಾರ್ಶಲ್ ಸೊಕೋಲೋವಸ್ಕಿಯಲ್ಲಿ ಕ್ಷಮೆ ಬೇಡಿದನು.

● ಆಹಾರ ಮತ್ತು ಇತರ ಮುಖ್ಯ ಪದಾರ್ಥಗಳನ್ನು ಆಂಗ್ಲೊ–ಅಮೇರಿಕನ್–ಫ್ರೆಂಚ ವಲಯಕ್ಕೆ ಕಳುಹಲು ನೂರಕ್ಕಿಂತ ಹೆಚ್ಚು ವಿಮಾನಗಳನ್ನು ಫ್ರಾಂಕ್‌ಫರ್ಟಿನಿಂದ ಹೊರಡಿಸಲಾಯಿತು. ಪಶ್ಚಿಮ ಜರ್ಮನಿಯಲ್ಲಿ ಹೊಸ ನಾಣ್ಯಪದ್ಧತಿಯನ್ನು ಜಾರಿಗೆ ತಂದುದರ ವಿರುದ್ಧ ರಶಿಯನ್ನರು ಕೈಕೊಂಡ ಉಗ್ರಕ್ರಮಗಳಿಂದಾದ ಹಾನಿಯನ್ನು ತಡೆಗಟ್ಟಲು ಪಶ್ಚಿಮದ ಮಿತ್ರರು ಹೀಗೆ ಮಾಡಬೇಕಾಯಿತು. ಆದರೂ ಪಶ್ಚಿಮ ಜರ್ಮನಿಯಲ್ಲಿಯ ಅನೇಕ ಪ್ರಜೆಗಳು ಹೊಟ್ಟೆಗೆ ಬದ್ದೆ ಬಟ್ಟೆ ಸುತ್ತಿಕೊಳ್ಳುವ ಪರಿಸ್ಥಿತಿ ತಪ್ಪಲಿಲ್ಲ. ಆದುದರಿಂದ ಇನ್ನೂ ಹೆಚ್ಚು ಸಂಖ್ಯೆಯಿಂದ ವಿಮಾನಗಳನ್ನು ಬಳಸಿ ಅವಶ್ಯಕ ಪದಾರ್ಥಗಳನ್ನು ಪೂರಯಿಸಲು ಪಶ್ಚಿಮದ ಮಿತ್ರರು ನಿರ್ಧರಿಸಿದ್ದಾರೆ.

● ರಶಿಯನ್ನರು ಆಗಲೆ ರೂಬಲ್ ಮಾರ್ಕ್ ಎಂಬ ತಮ್ಮ ನಾಣ್ಯವನ್ನು ಪೂರ್ವ ಜರ್ಮನಿಯಲ್ಲಿ ಜಾರಿಗೆ ತಂದಿರುವರಲ್ಲದೆ, ಮುಚ್ಚಿದ ವಾಹನ ಸಂಚಾರ ಮಾರ್ಗಗಳನ್ನು ಪಶ್ಚಿಮ ಮಿತ್ರರ ವಲಯಕ್ಕೆ ತೆರೆದುಕೊಡಲಿಲ್ಲ.

● ಬ್ರಿಟಿಶರು ಬರ್ಲಿನ್ನಿನಲ್ಲಿರುವ ತಮ್ಮ ಸೇನಾಪತಿಯಾದ ಮೇಜರ್ ಜನರಲ್ ಹರ್ಬರ್ಟನಿಗೆ ಮಿತವ್ಯಯದ ಬಗ್ಗೆ ವಿಶೇಷ ಅಜ್ಞೆಯೊಂದನ್ನು ಕೊಟ್ಟಿದ್ದಾರೆ.

# ನಗೆಯ ನೊರೆ

ಅವನು— ನಿಮ್ಮ ಜೀವನವನ್ನು ಸುಧಾರಿಸಬಲ್ಲ ಯಾವ ಪುಸ್ತಕವನ್ನು ನೀನು ಓದಿರುವೆ?
ಅವಳು— ಬ್ಯಾಂಕಿನ ಚೆಕ್ ಬುಕ್ಕನ್ನು.

\+ + +

ಅವಳು— ಬಹಳ ಒಳ್ಳೆಯದಾಯಿತು, ಅಯ್ಯೋ, ಈ ವಜ್ರದ ಹರಳುಗಳು ಎಷ್ಟು ಸುಂದರವಾಗಿವೆ!

ಅವನು— ಒಳ್ಳೆಯತನಕ್ಕೂ ವಜ್ರದ ಹರಳಿಗೂ ಯಾವ ಸಂಬಂಧವೂ ಇಲ್ಲ, ತಿಳಿಯಿತೇನೇ?

\+ + +

ಅವಳು— ಗಂಡ ನಿತ್ಯವೂ ಸಂಜೆ ಸಿನೆಮಕ್ಕೆ ಹೋಗುವ ಅಭ್ಯಾಸವಿದ್ದವನಾದರೆ ಹೆಂಡತಿಯೇನು ಮಾಡಬೇಕು?

ಅವನು— ಒಳ್ಳೆಯ ಹೆಂಡಂದಿರಂತೆ ಅವನ ಬೆನ್ನುಹಿಡಿದು ಸಾಗಬೇಕು.

\+ + +

ಅವನು— ಪ್ರಾಯದ ಹೆಂಡತಿಯಿದ್ದರೆ ಉತ್ತಮವೋ? ಸುಂದರಿಯಾದವಳಿದ್ದರೆ ಉತ್ತಮವೋ?

ಅವಳು— ಇಬ್ಬರೂ ಪ್ರಯೋಜನಕ್ಕೆ ಬರುವವರಲ್ಲ; ಗಂಡನ ಇಂಗಿತವನ್ನು ತಿಳಿದುಕೊಳ್ಳುವ ಜಾಣ ಹೆಂಡತಿಯೇ ಸರ್ವೋತ್ತಮ.

\+ + +

ಅವನು—ಹುಡುಗಿಯರು ಯಾವಾಗಲೂ ಮುತ್ತಿಗೆ ಕೆನ್ನೆ ಒಡ್ಡುವರಲ್ಲದೆ, ಮುತ್ತನ್ನೇಕೆ ತಾವು ತೆಗೆದುಕೊಳ್ಳುವುದಿಲ್ಲ ?

ಅವಳು— ನೀನು ಹೆಣವನ್ನು ಮದುವೆಯಾಗಿರಬೇಕು, ಹುಡುಗಿಯನ್ನಲ್ಲ !

× × ×

ಅವನು— ಹೆಂಗಸಿನ ಬಾಯಲ್ಲಿ "ಒಲ್ಲೆ" ಎಂಬುದು ಯಾವಾಗಲೂ "ಒಪ್ಪಿಗೆಯೆಂಬ" ಅರ್ಥದಲ್ಲೇ ಏಕೆ ಪ್ರಯೋಗಿಸಲ್ಪಡುತ್ತದೆ ?

ಅವಳು— ನೀನೆಂದೂ ಜಡಸ್ವಭಾವದವಳನ್ನು ಮಾತಾಡಿಸಿ ಗೊತ್ತಿದ್ದವನಂತೆ ತೋರುವುದಿಲ್ಲ. ಅಂಥವಳ ಒಲ್ಲೆ ಒಲ್ಲೆಯೇ !

× × ×

### ಚೀನೀಯನ ತೀರ್ಪು

ಮದುವೆಯಾದವರನ್ನೇ ವ್ಯವಸ್ಥಾಪಕರನ್ನಾಗಿಯೂ ಮೇಲ್ವಿಚಾರಕರನ್ನಾಗಿಯೂ ಆರಿಸಿ ನನ್ನ ಕಾರ್ಯಾಲಯದಲ್ಲಿ ನಿಯಮಿಸತಕ್ಕದ್ದು ಎಂದು ಚೀನೀ ಜಮೀನುದಾರನು ತನ್ನ ದಿವಾನನಿಗೆ ಹೇಳಿದನು. ಅದೇಕೆ ಎಂದು ಕೇಳಲು– ಬ್ರಹ್ಮಚಾರಿಗಳು ಸರಿಯಾಗಿ ವರದಿ ತಯಾರು ಮಾಡುವುದನ್ನು ತಿಳಿದುಕೊಂಡಿರುವುದಿಲ್ಲ. ಎಂದೂ ಅವರಿಗೆ ಹೆಂಡತಿಗೆ ಸಂಗತಿಗಳನ್ನು ವಿವರಿಸುವ ಸಂದರ್ಭ ಒದಗಿರುವುದಿಲ್ಲ.—ಎಂದನಂತೆ !

× × ×

### ಬಾಯಿ ಮುಚ್ಚಿಸುವ ಬಗೆ

ಒಬ್ಬ ಒಂದು ದಿನ ತನ್ನ ಗೆಳೆಯನನ್ನು ಕೇಳಿದ. 'ಸಮಾರಂಭದ ಊಟಗಳಲ್ಲಿ ನನಗೆ ಹೊಟ್ಟೆ ತುಂಬಿಸಿಕೊಳ್ಳಲಿಕ್ಕೇ ಆಗುವುದಿಲ್ಲ. ಏಕೆಂದರೆ, ಹತ್ತಿರ ಕುಳಿತ ಹೆಂಗಸರು ಪ್ರಶ್ನೆ ಹಾಕಿ ಹಾಕಿ ನನ್ನನ್ನು ಮಾತಾಡಿಸುತ್ತಲೇ ಇರುತ್ತಾರೆ. ಏನು ಮಾಡಲಿ ?' ಅದಕ್ಕೆ ಅವನ ಗೆಳೆಯನೆಂದ.. 'ನಾನು ಅಂಥ ಸಂದರ್ಭದಲ್ಲಿ ಹೆಂಗಸರಿಗೇ ಪ್ರಶ್ನೆ ಹಾಕುತ್ತೇನೆ. ನಿಮಗೆ ಮದುವೆ ಆಗಿದೆಯೆ ? ಹೌದು ಎಂದಾಕೆ ಹೇಳಿದರೆ, ಮಕ್ಕಳೆಷ್ಟು ? ಎರಡು ಎಂದು ಉತ್ತರಿಸಿದರೆ, ಆದೇನು ಮತ್ತೇಕೆ ಆಗಲಿಲ್ಲ ? ಎಂದು ಕೇಳುವೆನು; ಆಕೆ ಸುಮ್ಮನಾಗಿ ಬಿಡುತ್ತಾಳೆ. ಮದುವೆ ಆಗಿದ್ದು ಮಕ್ಕಳಿಲ್ಲವಾದರೆ ಅದೇಕೆ ಎಂದ ಕೂಡಲೆ ಆ ಹೆಣ್ಣು ಬಾಯಿ ಮುಚ್ಚಿಕೊಳ್ಳುತ್ತಾಳೆ. ಮದುವೆ ಆಗದವಳಾಗಿದ್ದರೆ ಏಕೆ ಎಂದು ಬಿಟ್ಟರೆ ತಲೆ ತಗ್ಗಿಸಿ ತಣ್ಣಗೆ ಕೂಡುತ್ತಾಳೆ !

× × ×

### ಜಾಣತನದ ಸ್ಪರ್ಧೆ

ಒಬ್ಬ ಹಳ್ಳಿಯವನು ಡಾಕ್ಟರರೊಬ್ಬರ ಹತ್ತಿರ ಹೋಗಿ ತನಗೆ ಕಾಲು ನೋವಾಗಿದೆ ನೋಡಿರಿ ಎಂದು ಅವರಿಗೆ ಕಾಲು ತೋರಿಸಿದನು. ಅದಕ್ಕೆ ಡಾಕ್ಟರರು— ವಯಸ್ಸಾಗಿದೆ, ಅದಕ್ಕೋಸ್ಕರ ಹಾಗಾಗಿರಬಹುದು–ಎಂದರು. ಆಗ ಆ ಮುದುಕ, 'ನನ್ನ ಮತ್ತೊಂದು ಕಾಲಿಗೂ ಇದರಷ್ಟೇ ವಯಸ್ಸಾಗಿದೆ. ಅದು ನೆಟ್ಟಗಿದೆ. ಹಾಗಿದ್ದರೂ ಇದೇಕೆ ನೆಟ್ಟಗಿಲ್ಲ ? ಎಂದು ಕೇಳಿದ. ಡಾಕ್ಟರರು ಏನು ಉತ್ತರ ಕೊಡಬೇಕು ?

# ಮಹಿಳಾ-ಲೋಕ

★

ಸಂಗ್ರಹಕಾರ್ತಿ : "ಹಿರಿಯಕ್ಕ"

## ಕೌಟುಂಬಿಕ, ರಾಷ್ಟ್ರೀಯ ಕಾರ್ಯದಲ್ಲಿ ಸ್ತ್ರೀ ಪುರುಷರ ಹೊಣೆಗಳು

ಲೇಖಿಕೆ : ಕುಮಾರಿ ಕೃಷ್ಣಾ, ಬಿ. ಎ.

ಅ. ಹಿಂ. ಮಹಿಳಾ ಪರಿಷತ್ತಿನ ಛಿದ್ವೋಗಿಳ ಕೇಂದ್ರದ ಉತ್ತರ ಕಲಕತ್ತೆಯ ಶಾಖೆಯವರು ಏರ್ಪಡಿಸಿದ ಬೀಳ್ಕೊಡುವ ಸಮಾರಂಭದಲ್ಲಿ ಭಾಷಣ ಮಾಡುತ್ತ ಗವ್ಹರ್ನರ ಜನರಲ ರಾಜಗೋಪಾಲಾಚಾರ್ಯರು ಹೆಂಗಸರನ್ನು ಗಂಡಸಿನಷ್ಟೆ ಉಪಯುಕ್ತ ಮತ್ತು ಚಪಲ ನಾಗರಿಕರನ್ನಾಗಿ ಮಾಡಬೇಕೆಂದು ಹೇಳಿದರು. ಈ ತತ್ವಕ್ಕೆ ಯಾರಾದರೂ ಒಪ್ಪಬಹುದಾಗಿದೆ.

ಬಲವುಳ್ಳ ಸಮಾಜದಿಂದಲೆ ದೇಶದ ಪ್ರಗತಿ ಸಾಧ್ಯ. ಸ್ತ್ರೀ ಪುರುಷರು ಸಮಾಜದ ಎರಡು ಘಟಕಗಳು. ಎರಡು ಘಟಕಗಳು ಸಮಸಮಾನವಾಗಿ ಬೆಳಗಿದರೇನೇ ಸಮಾಜವು ಪುಷ್ಟಿಹೊಂದಬಹುದು. ಅದರ ಅರ್ಧದಷ್ಟು ಭಾಗವು ಹಿಂದೆ ಬಿದ್ದರೆ ದೇಶದ ಶಕ್ತಿಯು ಅರ್ಧವಾಗಿ ಅದರ ಬೆಳವಣಿಗೆಯೆ ಕುಂಠಿತವಾಗುವದು.

### ಒಣ ವೈರಾಗ್ಯ ಸಾಕು

ಹಿಂದುಸ್ತಾನದ ಬಾಲಿಕೆಯರಿಗೆ ಸುಖಸಮಾಧಾನಗಳಿಲ್ಲ. ಬಾಲಿಕೆಯರು ದೇವರ ಮೇಲೆ ಭಾರಹಾಕಿ, ಸೀತಾದೇವಿಯಂತೆ ನಮ್ಮ ಚಿತ್ತದಲ್ಲಿಯೆ ಆನಂದ ಹೊಂದಬೇಕೆಂದು ರಾಜಾಜಿಯವರು ಹೇಳಿದ ಮಾತನ್ನು ಒಪ್ಪುವದು ಕಠಿಣವಾಗಿದೆ. ಇಂದಿಗೆ ಸುಮಾರು ೨೦೦ ವರ್ಷಗಳ ವರೆಗೆ ಪೆರವರ ಆಳಿಕೆಯಲ್ಲಿ ಬೆಳೆದು ನಾವು ನಿರ್ವೀರ್ಯರಾಗಿದ್ದೇವೆ. ನಮ್ಮಲ್ಲಿ ಆತ್ಮವಿಶ್ವಾಸವೆ ಕಡಿಮೆಯಾಗಿದೆ. ಅದಕ್ಕೆ ನಮ್ಮ ವೇದಾಂತದ ಸಮಾಧಾನ ಹಚ್ಚಿಕೊಂಡು ನಮ್ಮ ಅಸಹಾಯತೆಯನ್ನು ಮುಚ್ಚಿಡಲು ಇಂದಿನವರೆಗೆ ಪ್ರಯತ್ನವು ನಡೆಯಿತು. ಇನ್ನಾದರೂ ಪ್ರತಿಯೊಂದು ಕೆಲಸದಲ್ಲಿ ದೇವರ ಮೇಲೆ ಭಾರ ಹಾಕುವ ಬುದ್ಧಿಯನ್ನು ತೊರೆದು ನಮ್ಮ ವ್ಯಕ್ತಿತ್ವದಲ್ಲಿ ವಿಶ್ವಾಸವಿಟ್ಟು, ನಮ್ಮ ಬುದ್ಧಿಶಕ್ತಿಗಳ ಪೂರ್ಣ ಉಪಯೋಗಮಾಡಿಕೊಂಡು ಧ್ಯೇಯ ಸಾಧನೆಯನ್ನು ಮಾಡಿಕೊಂಡೆ ತೀರುವೆವೆಂಬ ಹಟಮಾರಿತನವನ್ನು ಬೆಳೆಯಿಸುವದು ಇಂದಿನ ಪರಿಸ್ಥಿತಿಯಲ್ಲಿ ಹೆಚ್ಚು ಇಷ್ಟವಾಗಿದೆ. ನಾವು ನಾಸ್ತಿಕರಾಗಬೇಕೆಂದೇನೂ ಅಲ್ಲ. ಆದರೆ ಕೇವಲ ದೇವರ ಮೇಲೆ ಭಾರ ಹಾಕಿ ನಮ್ಮ ಅಸಹಾಯತೆಯನ್ನು ಮುಚ್ಚಿಕೊಳ್ಳುವದು ಮಾತ್ರ ಬೇಡ. ಗವ್ಹರ್ನರ ಜನರಲರು ಹೇಳಿದಂತೆ ಸೀತೆಗೆ ದೇವರಲ್ಲಿ ವಿಶ್ವಾಸವಿದ್ದಿತೋ ಇಲ್ಲವೆ ತನ್ನ ಶುದ್ಧ, ಪರಿಪೂರ್ಣ ಅಂತಃಕರಣದಲ್ಲಿ ವಿಶ್ವಾಸವಿದ್ದಿತೋ ಎಂಬ ವಿಷಯವು ವಿವಾದಾಸ್ಪದವಾಗಿದೆ.

ಚಿಕ್ಕ ಬಾಲಿಕೆಯರು ತಮ್ಮ ಮಾವಂದಿರ ಮನೆಗೆ ನಗುತ್ತ ಹೋಗುವದು ಧೈರ್ಯದ ಕೆಲಸವೇನೊ ಸರಿ. ಆದರೆ ಅಲ್ಲಿ ಅವರು ತಮ್ಮಲ್ಲಿದ್ದ ದೇವರ ಮೇಲಿನ ವಿಶ್ವಾಸದಿಂದಲೆ ಸೌಖ್ಯವನ್ನು ಅನುಭವಿಸುವರೆಂಬುದು ಮಾತ್ರ ಹೆಮ್ಮೆಯ ವಿಷಯವಲ್ಲ. ಅವರ ದೈವಿಕತೆಯ ಹಿಂದೆ ಅವರ ದೀನ ಅಸಹಾಯ ಪರಿಸ್ಥಿತಿ ತುಂಬಿರುತ್ತದೆ. ಶಿಕ್ಷಣ, ಅನುಭವ, ಧೈರ್ಯ, ಕರ್ತೃತ್ವಶಕ್ತಿ ಇವು ಯಾವವೂ ಅವಳಲ್ಲಿ ಇರುವದಿಲ್ಲ. ಇದ್ದರೂ ಅವು ವಿಕಾಸಹೊಂದಿ ಅವಳದೇ ಒಂದಾದ ವೈಶಿಷ್ಟ್ಯಪೂರ್ಣ ವ್ಯಕ್ತಿತ್ವದ ಬೆಳವಣಿಗೆಯಾಗುವಷ್ಟು ವಯಸ್ಸು ಅವಳಿಗಿರುವದಿಲ್ಲ. ಅವಳ ದೇವರ ಮೇಲಿನ ವಿಶ್ವಾಸವು ಅವಳ ಅಸಹಾಯ ಪರಿಸ್ಥಿತಿಯ ದ್ಯೋತಕವೆ ಹೊರತಾಗಿ ದೇವರ ಮೇಲಿದ್ದ ನಿಜವಾದ ವಿಶ್ವಾಸವಲ್ಲ. ಎತ್ತ ನೋಡಿದರೂ ದೇವರು, ವಿಶ್ವಾಸ, ಸಾಂಪ್ರದಾಯಿಕತೆ ಇವೇ ಕಂಡು ಕೇಳಿಬರುವ ವಾತಾವರಣದಲ್ಲಿ ನಮ್ಮ ಧೈರ್ಯ ಸಾಹಸಗಳೇ ಕಮರಿಹೋಗುವ ಸಂಭವವಿದೆ. ಇಂದು ನಮಗೆ ದೇವರ ಮೇಲೆ ಸಾಕಷ್ಟು ವಿಶ್ವಾಸವಿದೆ. ಆದರೆ ನಮ್ಮಲ್ಲಿ ಧೈರ್ಯ ಸಾಹಸಗಳಿಂದ ತುಂಬಿ ತುಳುಕುತ್ತಿರುವ ವ್ಯಕ್ತಿತ್ವದ ಅಭಾವವಿದೆ. ಇಂಥ ವ್ಯಕ್ತಿತ್ವವನ್ನು ವಿಕಾಸಗೊಳಿಸುವಂತೆ ನಾವು ಪ್ರಯತ್ನ ಪಡಬೇಕು.

ಬಾಲಿಕೆಯರು ಅವಿವಾಹಿತ ಉಳಿದು ಸಮಾಜಕ್ಕೆ ಸೇವೆ ಸಲ್ಲಿಸುವದಕ್ಕಿಂತ ವಿವಾಹಿತರಾಗಿ ದೇಶಕ್ಕೆ ಹಿತವಾಗುವಂಥ, ದೃಷ್ಟಿಯಲ್ಲಿ ಮಕ್ಕಳ ಪೋಷಣೆಯನ್ನು ಮಾಡುವದು ಹೆಚ್ಚು ಶ್ರೇಯಸ್ಕರವು; ಅದರಿಂದ ದೇಶಕ್ಕೆ ಹೆಚ್ಚಿನ ಸೇವೆ ಸಲ್ಲಿಸಿದಂತಾಗುವದು ಎಂದು ಅವರು ಹೇಳಿದ್ದು ಮಾತ್ರ ಸರ್ವಸಮ್ಮತವಾದ ಮಾತು.

ಮೊನ್ನೆ ಮೊನ್ನೆ ಅ. ಭಾ. ಚರಖಾ ಸಂಘದ ಅಧ್ಯಕ್ಷರಾದ ಶ್ರೀ ಧೀರೇಂದ್ರಭಾಯಿ ಮಜುಮದಾರರು ಹುಬ್ಬಳ್ಳಿಯಲ್ಲಿ ಭಗಿನೀ ಮಂಡಳದ ಪರವಾಗಿ ಮಾಡಿದ ಭಾಷಣದಲ್ಲಿ ಹೇಳಿದಂತೆ ಸ್ವಾತಂತ್ರ್ಯರಕ್ಷಣೆಯು ಸ್ತ್ರೀಯರ ಹೊಣೆಯಾಗಿದೆ. ಬಲವಾದ ಸಮಾಜದ ನಿರ್ಮಾಣದಿಂದಲೆ ಇದು ಸಾಧ್ಯ. ಇಂಥ ಸಮಾಜವನ್ನು ಸ್ತ್ರೀಯರೆ ಕಟ್ಟಬಹುದು. ಇಂದಿನ ಬಾಲಕರು ನಾಳಿನ ನಾಗರಿಕರು ಬಾಲಕರನ್ನು ಮಾತೆಯರು ಯೋಗ್ಯ ನಾಗರಿಕರಾಗುವಂತೆ ಜಾಗರೂಕತೆಯನ್ನು ವಹಿಸಿ ಬೆಳೆಸಿದರೆ, ನಾಳಿನ ಸಮಾಜವು ಬಲವುಳ್ಳದ್ದಾಗುವದು. ಇದೇ ಸ್ತ್ರೀಯರ ಪ್ರಥಮ ಕರ್ತವ್ಯ, ದೇಶಕ್ಕೆ ಸಲ್ಲಿಸುವ ಹೆಚ್ಚಿನ ಸೇವೆ.

### ಪುರುಷರೂ ಸಹಕರಿಸಬೇಕು

ಆದರೆ ಹೆಂಗಸು ಇಂಥ ಸೇವೆಯನ್ನು ಸಲ್ಲಿಸಲು ಶಕ್ಯವಾಗುವಂತೆ ಪರಿಸ್ಥಿತಿಯನ್ನು ಕಲ್ಪಿಸಿಕೊಡುವ ಹೊಣೆ ಗಂಡಸಿನ ಮೇಲಿದೆ ಎಂಬ ಮಾತನ್ನು ಮಾತ್ರ ಗಂಡಸು ಒಪ್ಪಬೇಕು. ಗಂಡಸು ಮನೆಯ ಕಡೆಗೆ ಅಲಕ್ಷ್ಯ ಮಾಡಿದರೆ, ಮಕ್ಕಳಲ್ಲಿ ಅನಾಸ್ಥೆ ತೋರಿದರೆ, ಬಾಲಕರನ್ನು ಯೋಗ್ಯ ರೀತಿಯಿಂದ ಬೆಳೆಸುವದು ಹೆಂಗಸಿಗೆ ಕಠಿಣವಾಗುವದು. ಬಾಲಕನ ಭಾವನಾಪ್ರಧಾನ ಎಳೆಯ ಮನಸಿನ ಮೇಲೆಯೂ ಅದರ ಅನಿಷ್ಟ ಪರಿಣಾಮವಾಗುವದು. ಹಿಂದೀ ಸ್ತ್ರೀಯರು ಇನ್ನೂ ಅಶಿಕ್ಷಿತರು. ಮಕ್ಕಳನ್ನು ಹೇಗೆ ಬೆಳೆಸಬೇಕೆಂಬುದರ ಬಗ್ಗೆ ಅವರಿಗೆ ಜ್ಞಾನವಿಲ್ಲ. ಸುಶಿಕ್ಷಿತ ಗಂಡಸರು ಕೂಡ ಮಕ್ಕಳ ಬೆಳವಣಿಗೆಯಲ್ಲಿ ಅನಾಸ್ಥೆ ತೋರುವದು ಕಂಡುಬರುತ್ತದೆ. ಇಂಥ ಪರಿಸ್ಥಿತಿಯನ್ನು ಹೋಗಲಾಡಿಸಬೇಕು. ಸ್ತ್ರೀಪುರುಷರು ತಮ್ಮ ಹೊಣೆಯನ್ನು ಅರಿತು ತಮ್ಮ ಕರ್ತವ್ಯವನ್ನು ಪಾಲಿಸಬೇಕು. ಕೌಟುಂಬಿಕ ಜೀವನಕ್ಕೆ ವಿಶೇಷ ಮಹತ್ವವಿದೆ. ಶ್ರೀ ರಾಮೇಶ್ವರಿ ನೆಹರೂರವರು ತಮ್ಮ ಒಂದು ಲೇಖದಲ್ಲಿ ಬರೆದಂತೆ ನಾಳಿನ ನಾಗರಿಕರ ಮಾನಸಿಕ ಶಾರೀರಿಕ ವಿಕಾಸವು ಮನೆಯ ವಾತಾವರಣದಲ್ಲಿಯೇ ಆಗುತ್ತವೆ. ಅವರ ವ್ಯಕ್ತಿತ್ವವು ಇಲ್ಲಿಯೆ ರೂಪುಗೊಳ್ಳುತ್ತಿದೆ. ಆದ್ದರಿಂದ ಪುರುಷನು ಕೂಡ ಸ್ತ್ರೀಯಂತೆ ಕೌಟುಂಬಿಕ ಜೀವನದಲ್ಲಿ ಆಸ್ಥೆ ವಹಿಸಿ, ಅದನ್ನು ನಂದನವನ ಮಾಡಲು ಪ್ರಯತ್ನಿಸಿ, ಬಾಲಕರ ವ್ಯಕ್ತಿತ್ವದ ವಿಕಾಸಕ್ಕೆ ಆಸ್ಪದ ಮಾಡಿಕೊಡಬೇಕು.

---

## ನಿಜಾಮರ ತಂತಿಗೆ ರಾಜಾಜಿಯವರ ಉತ್ತರ

ರಾಜಾಜಿಯವರು ಭಾರತದ ಗವ್ಹರ್ನರ ಜನರಲ ಪದ ಸ್ವೀಕರಿಸಿದ ಕೂಡಲೆ ನಿಜಾಮರು, "ಹಿಂದುಸ್ತಾನದ ಗವ್ಹರ್ನರ ಜನರಲ್ ಪದ ಸ್ವೀಕರಿಸಿದ್ದಕ್ಕೆ ನಿಮಗೆ ಅಭಿನಂದನೆಗಳು. ನೀವು ಶಾಂತಿಕಾರಕರೆಂದು ಕೀರ್ತಿಗಳಿಸಿದವರಾದ್ದರಿಂದ ನಿಮ್ಮ ಅಧಿಕಾರದ ಅವಧಿಯಲ್ಲಿ ಹಿಂದುಸ್ತಾನದಲ್ಲಿ ಗಲಭೆ ಮಾಯವಾಗಿ ಶಾಂತಿ ಸುವ್ಯವಸ್ಥೆ ನೆಲಸುವವೆಂದು ನನಗೆ ವಿಶ್ವಾಸವಿದೆ." ಎಂದು ತಂತಿಕಳಿಸಿದರು. ಇದಕ್ಕೆ ಉತ್ತರವಾಗಿ ಗವರ್ನರ ಜನರಲರಾದ ರಾಜಾಜಿ ತಾ ೨೭ ಕ್ಕೆ "ನೀವು ವ್ಯಕ್ತಮಾಡಿದ ಸದಿಚ್ಛೆ ಹಾಗು ಧನ್ಯವಾದಗಳ ಬಗ್ಗೆ ನಾನು ಉಪಕೃತನಿರುವೆನು. ಅಪಸ್ವರವು ನನಗೆ ತಿರಸ್ಕರಣೀಯವಾಗಿದ್ದು ದೇವರು ನಮ್ಮನ್ನು ಶಾಂತಿ ಮತ್ತು ಸುಖದ ವಿಶಾಲ ಮಾರ್ಗಕ್ಕೆ ಹಚ್ಚುವನೆಂದು ನನ್ನ ಆಶೆ ಇದೆ" ಎಂದು ಪ್ರತಿ ತಂತಿ ಕಳಿಸಿದರು.

## ನಿಜಾಮರಿಗೆ ಎಚ್ಚರಿಕೆ

### ಹಿಂದಿ ಮುಸಲ್ಮಾನರ ಪ್ರತಿಭಟನೆ

### ಹನಿ ರಕ್ತವಿರುವವರೆಗೆ ಹೋರಾಡುವೆವು

ಜೂನ ೨೪ ಕ್ಕೆ ಝಾಂಸಿಯಲ್ಲಿ ಸೇರಿದ್ದ ಹಿಂದೀ ಮುಸಲ್ಮಾನರ ಪ್ರಚಂಡ ಸಭೆಯಲ್ಲಿ ಹೈದರಾಬಾದ ನಿಜಾಮರು ಮತ್ತು ರಜಾಕಾರರು ಹಿಂದುಸ್ತಾನದ ಮೇಲೆ ದಾಳಿ ಮಾಡಿದರೆ ಹಿಂದುಸ್ತಾನದ ಸ್ವಾತಂತ್ರ್ಯ ರಕ್ಷಣೆಗೆ ಮೈಯಲ್ಲಿ ಹನಿ ರಕ್ತವಿರುವ ವರೆಗೂ ಹಿಂದುಸ್ತಾನದ ೪॥ ಕೋಟಿ ಮುಸಲ್ಮಾನರು ಹೋರಾಡುವರೆಂಬ ಗೊತ್ತುವಳಿಯನ್ನು ಸ್ವೀಕರಿಸಲಾಯ್ತು. ನಿಜಾಮರ ಮೂಲಕ ಹಿಂದುಸ್ತಾನದ ೪॥ ಕೋಟಿ ಮುಸಲ್ಮಾನರಿಗೆ ಸ್ವಾತಂತ್ರ್ಯ ಕೊಡಿಸುವೆವೆಂದು ಬಡಾಯಿ ಕೊಚ್ಚಿದ ಕಾಶೀಂ ರಜವಿಯ ಭಾಷಣವನ್ನು ಈ ಗೊತ್ತುವಳಿಯಲ್ಲಿ ತೀವ್ರವಾಗಿ ಖಂಡಿಸಲಾಗಿದೆ. ಅಲ್ಲದೆ ಅದರಲ್ಲಿ ಹಿಂದೀ ಮುಸಲ್ಮಾನರೀಗ ಸ್ವತಂತ್ರವಾದ ಗೌರವದ ಜೀವನ ನಡೆಸುತ್ತಿದ್ದಾರೆಂಬುದನ್ನು ಒತ್ತಿ ಹೇಳಲಾಗಿದೆ. ವಿಭಜನೆಯ ಕಟು ಅನುಭವವನ್ನುಂಡ ಅವರು ತಮ್ಮ ರಕ್ಷಣೆಗಾಗಿ ಹೊರಗಿನ ಜಾತೀಯ ಸಂಸ್ಥೆಗಳ ಮುಖ ನೋಡಲಾರರು ಎಂದೂ ಗೊತ್ತುವಳಿಯಲ್ಲಿ ಕಾಣಿಸಲಾಗಿದೆ. ಇಷ್ಟೂ ಮೀರಿ ನಿಜಾಮರು ಹಿಂದುಸ್ತಾನದ ಮೇಲೆ ದಾಳಿ ಮಾಡಿದರೆ ನೆಹರು ಸರಕಾರಕ್ಕೆ ಸಂಪೂರ್ಣ ಬೆಂಬಲ ಕೊಡುವ ೪॥ ಕೋಟಿ ಹಿಂದೀ ಮುಸಲ್ಮಾನರ ವಿರೋಧವನ್ನು ಎದುರಿಸಬೇಕಾಗುವದೆಂದೂ ನಿಜಾಮರು ಹಿಂದೀ ಒಕ್ಕೂಟದಲ್ಲಿ ಸೇರುವದೇ ಒಳಿತೆಂದೂ ಪಾಕಿಸ್ತಾನ ಮತ್ತು ಇನ್ನುಳಿದ ಹಿತಶತ್ರುಗಳ ಸಲಹೆಗಳಿಗೆ ಕಿವಿಗೊಡುವದು ಕ್ಷೇಮವಲ್ಲವೆಂದೂ ಸ್ಪಷ್ಟಪಡಿಸಲಾಗಿದೆ.

---

## ನಿಜಾಂ ಗಡಿಯಲ್ಲಿ ನುಗ್ಗಿ ಹೊಡೆಯಿರಿ

### ಮದ್ರಾಸ ಸರಕಾರದ ಆಜ್ಞೆ

ಹಿಂದುಸ್ತಾನದ ಮೇಲೆ ನಿಜಾಂಗಡಿಯಿಂದ ದಾಳಿಯಾದರೆ ದಾಳಿಗಾರರನ್ನು ನಿಜಾಂಗಡಿಯಲ್ಲಿ ೩ ಮೈಲು ನುಗ್ಗಿ ಹೊಡೆಯಲು ಅಡ್ಡಿಯಿಲ್ಲವೆಂದು ಕೇಂದ್ರ ಸರಕಾರದವರು ಹೊರಡಿಸಿದ ಆಜ್ಞೆಯನ್ನು ಮದ್ರಾಸ ಹೈದರಾಬಾದ ಗಡಿಯಲ್ಲಿರುವ ಜಿಲ್ಹೆಗಳ ಕಲೆಕ್ಟರರು ಕೂಡಲೆ ಜಾರಿಯಲ್ಲಿ ತರಬೇಕೆಂದು ಮದ್ರಾಸ ಸರಕಾರದ ಆಜ್ಞೆ ಹೊರಟಿದೆ.

---

## ಪಾಕಿಸ್ತಾನದಿಂದ ಹೈದರಾಬಾದಕ್ಕೆ ಶಸ್ತ್ರಾಸ್ತ್ರ

ಪಾಕಿಸ್ತಾನವು ಹೈದರಾಬಾದಕ್ಕೆ ಕಳ್ಳತನದಿಂದ ವಿಮಾನ ಮೂಲಕ ಶಸ್ತ್ರಾಸ್ತ್ರಗಳನ್ನು ಕಳಿಸುತ್ತಿರುವದೆಂಬುದು ಪ್ರಕಟವಾಗಿದೆ. ಹಿಂದುಸ್ತಾನ ಪಾಕಿಸ್ತಾನಗಳ ನಡುವೆ ವಿಮಾನ ಹಾರಾಟದ ಬಗ್ಗೆ ಮೊನ್ನೆ ಮೊನ್ನೆ ಒಪ್ಪಂದವಾಗಿತ್ತು. ಹೀಗೆ ಕಳ್ಳತನದಿಂದ ರಾತ್ರಿ ನಡೆದ ಹೈದರಾಬಾದ ಪಾಕಿಸ್ತಾನಗಳ ವಿಮಾನೋಡ್ಡಾಣವು ಅಂತಾರಾಷ್ಟ್ರೀಯ ಕಾನೂನಿಗೂ ಹಿಂದುಸ್ತಾನ ಪಾಕಿಸ್ತಾನಗಳ ವಿಮಾನ ಒಪ್ಪಂದಕ್ಕೂ ಭಂಗ ತರುವಂತಹದೆಂದು ಹಿಂದುಸ್ತಾನ ಸರಕಾರವು ಆಕ್ಷೇಪಿಸಿದೆ. ಆ ಒಪ್ಪಂದದ ಪ್ರಕಾರ ಪಾಕಿಸ್ತಾನ ವಿಮಾನ ನಿಲ್ದಾಣದಿಂದ ಹೊರಟ ವಿಮಾನವು ಹಿಂದುಸ್ತಾನದ ಯಾವದಾದರೊಂದು ವಿಮಾನ ನಿಲ್ದಾಣದಲ್ಲಿ ಇಳಿದೇ ಹೈದರಾಬಾದ ಗಡಿಯನ್ನು ಪ್ರವೇಶಿಸಬೇಕು. ಹಾಗೆ ಮಾಡದೆ ಈ ಕಳ್ಳ ವಿಮಾನಗಳು ನೇರವಾಗಿ ಹೈದರಾಬಾದಕ್ಕೆ ಹೋಗುತ್ತಿದ್ದವು.

ಹೈದರಾಬಾದದೊಡನೆ ನಡೆದ ಮಾತುಕತೆ ಮುರಿದನಂತರ ನಿಜಾಮರು ಸಾಧ್ಯವಿದ್ದ ಕಡೆಯಿಂದ ಶಸ್ತ್ರಾಸ್ತ್ರಗಳನ್ನು ತಂದು ತುಂಬಿಕೊಳ್ಳುತ್ತಿದ್ದರು. ಪಾಕಿಸ್ತಾನದಿಂದೂ ರಾಶಿರಾಶಿಯಾಗಿ ಶಸ್ತ್ರಾಸ್ತ್ರಗಳು ಹೈದರಾಬಾದ ಸೇರುತ್ತಿವೆಯೆಂದು ತಿಳಿದ ಕೂಡಲೆ ಹಿಂದುಸ್ತಾನ ಸರಕಾರವು ಇದನ್ನು ತಡೆಯಲು ತಕ್ಕ ಉಪಕ್ರಮ ಕೈಕೊಂಡಿದೆ.

---

● ಸೋವಿಯಟ್ಟಿನವರ ಪ್ರೋತ್ಸಾಹದಿಂದೆದ್ದ ಸಾಮ್ಯವಾದೀ ಐಕ್ಯಪಕ್ಷದವರು ಜರ್ಮನಿಯ ರಾಜಧಾನಿಯ ಎಲ್ಲೆಡೆಯಲ್ಲೂ ಸೋವಿಯಟ್ ನಾಣ್ಯ ಪದ್ಧತಿಯನ್ನು ಮನ್ನಿಸಲು ಒತ್ತಾಯ ಪಡಿಸುವುದರ ಸಲುವಾಗಿ ಸಾರ್ವತ್ರಿಕ ಸಂಪನ್ನು ಹೂಡಲು ತಯಾರಿಕೆ ನಡೆಸಿದ್ದಾಗಿ ಬ್ರಿಟಿಶ ಪತ್ರಿಕೆಯೊಂದು ಪ್ರಕಟಿಸಿದೆ. ಈ ಪ್ರಕಟನೆಯನ್ನು ಕಮ್ಯುನಿಸ್ಟರ ಟ್ರಿಬ್ಯೂನ್ ಪತ್ರಿಕೆ ಅಲ್ಲಗಳೆದಿದೆ.

## ದಿವಂಗತ ಕೊರಡಕಲ್ ಶ್ರೀನಿವಾಸರಾಯರು



ಶ್ರೀ ಕೊರಡಕಲ್ ಶ್ರೀನಿವಾಸರಾಯರ ಅಕಾಲನಿಧನದಿಂದ ಕರ್ನಾಟಕದ ಶಿಕ್ಷಣ ಹಾಗು ಸಾಹಿತ್ಯಕ್ಷೇತ್ರದಿಂದ ಒಂದು ನಿರಹಂಕಾರಿ ವ್ಯಕ್ತಿ ಕಣ್ಮರೆಯಾದಂತಾಗಿದೆ. ಅನೇಕ ವರ್ಷಗಳಿಂದ ಉಡುಪಿಯ ಬೋರ್ಡ ಹೈಸ್ಕೂಲಲ್ಲಿ ಅಧ್ಯಾಪಕರಾಗಿಯೂ ಸಾಹಿತ್ಯ ಸಾಮಾಜಿಕ ಕಾರ್ಯಗಳಲ್ಲಿ ದುಡಿದೂ ಶ್ರೀ ಕೊರಡಕಲ್ಲರು ಎಲ್ಲರ ಆದರಕ್ಕೆ ಪಾತ್ರರಾಗಿದ್ದರು. ಅವರ ಶಿಷ್ಯರಲ್ಲಿ ಅನೇಕರು ಇಂದು ಸಾಹಿತ್ಯ ಕ್ಷೇತ್ರದಲ್ಲಿ ಪ್ರಸಿದ್ಧರಾಗಿದ್ದಾರೆ. ಇನ್ನು ಅನೇಕರು ಪತ್ರಿಕಾವೃತ್ತಿಯನ್ನು ಯಶಸ್ವಿಯಗಿ ಅವಲಂಬಿಸಿದ್ದಾರೆ. ಶಾಲೆಯ ಪರಿಮಿತವಾದ ಶಿಕ್ಷಣ ಪ್ರಣಾಲಿಯ ಹೊರಗಿನ ಚಟುವಟಿಕೆಗಳನ್ನೆಲ್ಲ ದುರ್ವ್ಯಸನವೆಂದು ಶಿಕ್ಷಕರು ಗಂಟು ಹುಬ್ಬಿನಿಂದ ನೋಡುತಿದ್ದ ಕಾಲದಲ್ಲಿ ಶ್ರೀನಿವಾಸರಾಯರು ತಮ್ಮ ಶಿಷ್ಯರಿಗೆ ಸಾಹಿತ್ಯಾಭ್ಯಾಸ, ಲೇಖನ ವ್ಯವಸಾಯಗಳನ್ನು ಕೈಕೊಳ್ಳಲು ಹುರಿದುಂಬಿಸುತಿದ್ದರು. ಶಾಲೆಯ "ಸ್ಕೂಲ್‌ಡೆ" ಉತ್ಸವಗಳ ಆತ್ಮವೆಂದರೆ ಶ್ರೀನಿವಾಸರಾಯರೆ. ಊರಲ್ಲಿ ಯಾವ ಸಾಮಾಜಿಕ, ಸಾಹಿತ್ಯಕ ಸಮಾರಂಭದಲ್ಲಿಯೂ ಶ್ರೀನಿವಾಸರಾಯರಿಲ್ಲದಿದ್ದರೆ ಹುರುಪೇ ಇರುತಿರಲಿಲ್ಲ.

ಶ್ರೀನಿವಾಸರಾಯರ ಜನ್ಮ ೧೮೯೫ ರಲ್ಲಾಯಿತು. ಉಡುಪಿ ಮಂಗಳೂರುಗಳಲ್ಲಿ ಹೈಸ್ಕೂಲ ಕಾಲೇಜ ವಿದ್ಯಾಭ್ಯಾಸಗಳನ್ನು ಮುಗಿಸಿ ಅವರು ಶಿಕ್ಷಣ ವೃತ್ತಿಯನ್ನು ಕೈಕೊಂಡರು. ದ. ಕನ್ನಡ ಜಿಲ್ಹಾ ಬೋರ್ಡಿನ ಹೈಸ್ಕೂಲುಗಳಲ್ಲೆಲ್ಲ ಅವರು ಅಧ್ಯಾಪಕರಾಗಿದ್ದುದರಿಂದ ಇಡಿ ಜಿಲ್ಹೆಯಲ್ಲಿ ಅವರ ಶಿಷ್ಯವೃಂದವಿದೆ. ಉಡುಪಿಗಂತೂ ಕಳೆದ ೨೦ ವರ್ಷಗಳಿಂದ ಅವರ ಸೇವೆ ಲಭಿಸಿದೆ. ಈ ಅವಧಿಯಲ್ಲಿ ಅವರ ಲೇಖನಿಯೂ ಸಂತತವಾಗಿ ಕಾರ್ಯ ಮಾಡುತ್ತ ಇತ್ತು. ಅನೇಕ ನಾಟಕ, ಚಿಕ್ಕ ಕಥೆ, ನಿಬಂಧ, ಪ್ರಹಸನಗಳನ್ನು ಅವರು ಬರೆದರು. ಅವುಗಳಲ್ಲಿ ಈಗಾಗಲೆ ಸುಮಾರು ೧೭ ಗ್ರಂಥಗಳು ಪ್ರಸಿದ್ಧವಾಗಿವೆ. ಅಚ್ಚುಗಾಣದೆ ಇನ್ನೂ ಹಲವು ಉಳಿದಿವೆ. ಪತ್ರಿಕೆಗಳಲ್ಲಿಯೂ ಇವರು ಪ್ರಕಟವಾಗಿಯೂ ಗುಪ್ತವಾಗಿಯೂ ಲೇಖಗಳನ್ನು ಬರೆಯುತಿದ್ದರು. ದ.ಕ. ದ್ರಾವಿಡ ಬ್ರಾಹ್ಮಣ ಸಂಘ, ಕರ್ನಾಟಕ ಸಂಘಗಳಲ್ಲಿಯೂ ಅವರು ಬಹಳ ಕಾರ್ಯ ಮಾಡಿದರು.

ಶ್ರೀನಿವಾಸರಾಯರು ಎರಡು ವಿವಾಹಗಳಿಂದ ನಾಲ್ಕು ಗಂಡು, ಒಂದು ಹೆಣ್ಣು ಹೀಗೆ ೫ ಮಕ್ಕಳನ್ನು ಬಿಟ್ಟು ಹೋಗಿದ್ದಾರೆ. ಅವರ ಎರಡನೆಯ ಪತ್ನಿಯೂ ಎರಡು ವರ್ಷಗಳ ಕೆಳಗೆ ತೀರಿಕೊಂಡಿದ್ದರು. ಅವರ ಹಿರಿಯ ಮಗ ಡಾ. ವೆಂಕಟರಾಯರು ಉಡುಪಿಯಲ್ಲೆ ವೈದ್ಯಕ ವೃತ್ತಿಯಲ್ಲಿದ್ದಾರೆ. ದಕ್ಷಿಣ ಕನ್ನಡದ ಸ್ಥಿತಿಗತಿ, ಅದು ಕರ್ನಾಟಕ ಒಂದು ಮೂಲೆಯಲ್ಲಿರುವದೇ ಮೊದಲಾದ ಕಾರಣಗಳಿಂದ ಶ್ರೀನಿವಾಸರಾಯರ ಯೋಗ್ಯತೆಗೆ ತಕ್ಕ ಪ್ರಸಿದ್ಧಿ ಸಿಗಲಿಲ್ಲ. ಆದರೆ ಅದಕ್ಕಾಗಿ ಅವರಿಗೆ ಬೇಸರವಿದ್ದಿಲ್ಲ. ಪ್ರಸಿದ್ಧಿಗಾಗಿ ಅವರೆಂದೂ ಹಂಬಲಿಸಿದ್ದಿಲ್ಲ. ಅವರ ಗೆಳೆಯರೂ ಶಿಷ್ಯರೂ ಅವರ ಘನತೆಗೆ ತಕ್ಕ ಸ್ಮಾರಕವೊಂದನ್ನು ರಚಿಸುವ ಹವಣಿಕೆಯಲ್ಲಿದ್ದಾರೆ. ಅದು ಯಶಸ್ವಿಯಾಗಲಿ.

---

● ಸೋವಿಯಟ್ ಪತ್ರಿಕೆಗಳು ಪಶ್ಚಿಮದ ರಾಷ್ಟ್ರಗಳನ್ನು ಉಗ್ರವಾಗಿ ಟೀಕಿಸಿ ಬರ್ಲಿನ್ನಿನಿಂದ ಅವು ಹೊರಟು ಹೋಗಬೇಕೆಂದು ಪ್ರಚಾರ ನಡೆಸಿವೆ.

# 'ಕಮ್ಯುನಿಝಂ' ಎಂದರೇನು?

## ಜಗತ್ತಿನ ಕಮ್ಯುನಿಸ್ಟರ ಶಿಸ್ತು ಸಂಘಟನೆಗಳ ಸೂಕ್ಷ್ಮ ಪರಿಚಯ



ಆಚಾರ್ಯರು : ಎಂಜೆಲ, ಮತ್ತು ಮಾರ್ಕ್ಸ.

ಸರಿಯಾಗಿ ನೂರು ವರ್ಷ ಕೆಳಗೆ ಕಮ್ಯುನಿಝಂ ಅಥವಾ ಸಮಷ್ಟಿವಾದವೆಂಬ ರಾಜಕೀಯ-ಸಾಮಾಜಿಕ ತತ್ವ ಜನ್ಮವೆತ್ತಿದಾಗ ಅದು ಇಂದು ಜಗತ್ತಿನಲ್ಲಿ ಇಷ್ಟು ಅದ್ಭುತ ಶಕ್ತಿಯಾಗಬಹುದೆಂದು ಯಾರೂ ಕನಸಿನಲ್ಲಿಯು ಕೂಡ ನೆನಸಿರಲಿಲ್ಲ. ತರುಣ ಕಾರ್ಲ ಹೆನ್ರಿಕ್ ಮಾರ್ಕ್ಸನು (ವಯಸ್ಸು ೩೦) ೧೮೪೮ ರಲ್ಲಿ ಹೊರಡಿಸಿದ 'ಕಮ್ಯುನಿಸ್ಟ್ ಮೆನಿಫೆಸ್ಟೋ' ಅಥವಾ ಸಮಷ್ಟಿವಾದಿಘೋಷಣೆಮುಂದೆ ಅವನ "ಕ್ಯಾಪಿಟಲ್" (ಬಂಡವಳ) ಗ್ರಂಥದಲ್ಲಿ ವಿಸ್ತೃತವಾಗಿ ವಿವೇಚಿಸಲ್ಪಟ್ಟು ಕಮ್ಯುನಿಸ್ಟ ವೇದಾಂತದ ಬ್ರಹ್ಮಸೂತ್ರವಾಯಿತು. ಮಾರ್ಕ್ಸನ ಕಮ್ಯುನಿಸ್ಟ ಪಕ್ಷ ೧೭ ಸದಸ್ಯರಿಂದ ಪ್ರಾರಂಭವಾಗಿ ಇಂದು ಅಸಂಖ್ಯ ಸುಶಿಕ್ಷಿತ ನಿಷ್ಠಾವಂತ ಸದಸ್ಯರ ಪ್ರಚಂಡ ಶಕ್ತಿಯಾಗಿದೆ. ಇಂದು ಜಗತ್ತಿನ ಯಾವ ರಾಷ್ಟ್ರದಲ್ಲಿಯೂ ಒಬ್ಬನಾದರೂ ಕಮ್ಯುನಿಸ್ಟನಿಲ್ಲವೆಂದು ಹೇಳಲಾಸಲ್ಲ. ಕಮ್ಯುನಿಸ್ಟ ಪಕ್ಷದ ಸದಸ್ಯ ಸಂಖ್ಯೆಯಿಂದ ಅದರ ಶಕ್ತಿಯನ್ನು ಊಹಿಸುವದೂ ಸಾಧ್ಯವಿಲ್ಲ. ಏಕೆಂದರೆ ಕಮ್ಯುನಿಸ್ಟರು ಆರಾಮುಕುರ್ಚಿಯ ಇಲ್ಲವೆ ಸುಪ್ಪತ್ತಿಗೆಯ ರಾಜಕಾರಣಿಗಳಲ್ಲ. ಅವರು ನುರಿತ ಕಾರ್ಯಕರ್ತರು. ರಾಜ್ಯಗಳನ್ನು ತಲೆಕೆಳಗು ಮಾಡಲು ಶಿಕ್ಷಣ ಹೊಂದಿದ ರಾಜಕೀಯ ಸೈನಿಕರು.

### ಕಮ್ಯುನಿಝಂ ಎಂದರೇನು

ಕಮ್ಯುನಿಝಂ ಎಂದರೇನು? ಅದನ್ನು ಅರಿತುಕೊಳ್ಳುವದು ಅಥವಾ ವಿವರಿಸುವದು ಸಾಮಾನ್ಯ ಮನುಷ್ಯನಿಗೆ ಅತ್ಯಂತ ಕಠಿಣವೇ ಸರಿ. ರಾಜಕಾರಣ ಅರ್ಥಶಾಸ್ತ್ರ ಇತಿಹಾಸ ಇವೆಲ್ಲವುಗಳ "ತರ್ಕಶುದ್ಧ" ದೀರ್ಘಾಭ್ಯಾಸದಿಂದ ಮಾರ್ಕ್ಸ ಮತ್ತು ಅವನ ಗೆಳೆಯ ಏಂಜಲ್ಸ ಇವರು ಹೆಚ್ಚು ಕಡಿಮೆ ಪರಿಪೂರ್ಣವಾದ ಒಂದು "ದರ್ಶನ" ವನ್ನು ಸಿದ್ಧಗೊಳಿಸಿದರು: ಬಡತನ, ಸಾಂಸಾರಿಕ ತಾಪತ್ರಯ ಇವಾವುವನ್ನೂ ಲೆಕ್ಕಿಸದೆ ಈ ಜರ್ಮನ್ ಯಹೂದ್ಯ ಕುಲಸಂಭೂತನು ಬ್ರಿಟಿಶ ಮಹಾ ಪುಸ್ತಕಾಲಯದಲ್ಲಿ ವರ್ಷಗಟ್ಲೆ ಅಭ್ಯಾಸ ಮಾಡಿ ಅತ್ಯಂತ ಸ್ಫೋಟಕವಾದ ವಿಚಾರಗಳನ್ನು ಜಗತ್ತಿಗೆ ಹಂಚಿದನು. ಅವನು ಹಂಚಿದ ಕಲ್ಪನೆಗಳು ಇಂದು ಜಗತ್ತಿನ ಅನೇಕ ರಾಜ್ಯಾಧೀಶರ, ಸಂಪನ್ನರ ನಿದ್ದೆಯನ್ನು ದುಃಸ್ವಪ್ನದಂತೆ ಕೆಡಿಸುತಿದೆ.

ಕಾರ್ಲ ಮಾರ್ಕ್ಸನ ಕಾಲ ಯಂತ್ರಯುಗದ ಉತ್ಕರ್ಷದ ಕಾಲ. ಕೂಲಿಕಾರರ ಸಮಸ್ಯೆ ಅಗಲೆ ತಲೆಯೆತ್ತಿತ್ತು. ಯಂತ್ರದಲ್ಲಿ ತಮ್ಮ ವೈರಿಯನ್ನು ಅನೇಕ ಕೂಲಿಕಾರರು ಕಾಣುತ್ತಿದ್ದರು. ಯಂತ್ರಗಳು ಕೂಲಿಕಾರನನ್ನು ಗುಲಾಮನಾಗಿ ಮಾಡಿಕೊಳ್ಳುವವಿಷ್ಟೇ ಅಲ್ಲ ಅವು ಬಡವರ ಸರ್ವನಾಶವನ್ನೇ ಮಾಡುವವೆಂದು ಅನೇಕರು ಭವಿಷ್ಯ ನುಡಿದಿದ್ದರು.

ಮಾರ್ಕ್ಸನು ಈ ಸಿದ್ಧಾಂತವನ್ನು ಅಲ್ಲಗಳೆಯಲಿಲ್ಲ. ಆದರೆ ಅವನು ಬೇರೆ ಕೆಲವರಂತೆ ಯಂತ್ರಗಳನ್ನೆ ನಿರ್ನಾಮ ಮಾಡಬೇಕೆಂದು ಹೇಳಲಿಲ್ಲ. ಅವನು ಬಡವರಿಗೆ ಒಂದು ಹೊಸ ತರಹೋಪಾಯವನ್ನು, ಏಕೆ ಸ್ವರ್ಗೋದ್ಯಾನವನ್ನೇ ಕೊಡಮಾಡಿದನು. "ಬಡವರೇ ಭಾಗ್ಯಶಾಲಿಗಳು, ಸ್ವರ್ಗರಾಜ್ಯ ಅವರಿಗೇ ಮೀಸಲು" ಎಂದು ಬೈಬಲ್ಲು ಹೇಳಿದೆ. ಕಾರ್ಲಮಾರ್ಕ್ಸ ಕೂಲಿಕಾರರಿಗೆ ಸ್ವರ್ಗರಾಜ್ಯದ ಆಶೆ ತೋರಿಸದೆ ಭೂತಲ ಸ್ವರ್ಗವನ್ನು ಕೊಡಮಾಡಿದನು. ಇತಿಹಾಸದಲ್ಲಿ ಸಮಾಜ ರೂಪುಗೊಂಡ ರೀತಿಯನ್ನ ಪೃಥಕ್ಕರಿಸಿ ಇಡಿ ಇತಿಹಾಸವೆ ಆರ್ಥಿಕ ಹೋರಾಟದಿಂದ ತುಂಬಿದೆಯೆಂದು ಅವನು ತೋರಿಸಿದನು. ಇನಾಮದಾರಿ ಸಮಾಜವನ್ನು ಮೂಲೆಗೊತ್ತಿ ಅಥವಾ ನಾಶಮಾಡಿ ಸದ್ಯದ ಬಂಡವಳಗಾರ ಸಮಾಜ ಮೇಲೆ ಬಂತು. ಇಂದು ಸರಕಾರ ಅಥವಾ ರಾಜ್ಯಸತ್ತೆಯನ್ನು ವಶಪಡಿಸಿಕೊಂಡು ತಮ್ಮ ಸ್ವಾರ್ಥಕ್ಕಾಗಿ ಬಂಡವಳಗಾರರು ಉಪಯೋಗಿಸಿಕೊಳುತ್ತಿದ್ದಾರೆ. ಆದರೆ ಬಂಡವಳಗಾರಿಕೆಯಲ್ಲಿ ಅನೇಕ ವಿರೋಧಾಭಾಸಗಳು ಅಥವಾ ಬಿಕ್ಕಟ್ಟುಗಳು ಇವೆ. ಈ ಸಮಸ್ಯೆಗಳನ್ನು ಬಂಡವಳಗಾರಪದ್ಧತಿಯು ಸರ್ವಥಾ ಪರಿಹರಿಸಲಾರದು. ಅದು ತನ್ನಲ್ಲಿರುವ ದೋಷಗಳಿಂದ ತಾನೇ ಹಾಳಾಗುವದು. ಇನ್ನು ಕೂಲಿಕಾರರ ಸರದಿ. ಅವರು ಬಂಡವಳಗಾರರಿಂದ ಅಧಿಕಾರವನ್ನು ಕಸಿದುಕೊಂಡು ಅವರನ್ನು ನಾಶ ಮಾಡಿ ಸ್ವತಂತ್ರ ವರ್ಗರಹಿತ (ಅಂದರೆ ಬಡವ ಬಲ್ಲಿದ, ದುಡಿಯುವ ದುಡಿಸಿಕೊಂಡು ಉಣ್ಣುವವರೆಂಬ ಭೇದವಿಲ್ಲದ) ಸಮಾಜವನ್ನು ಕಟ್ಟುವರು. ಇದು ಇತಿಹಾಸದ ವಿಧಿ. ಅಂಥ ಸಮಾಜದಲ್ಲಿ ಮುಂದೆ ಯಾವ ತಿಕ್ಕಾಟ, ಕೊರತೆ, ಅಸೂಯೆಗಳಿಗೆ ಎಡೆಯಿಲ್ಲ; ಎಲ್ಲರೂ ದುಡಿಯುವರು, ಎಲ್ಲರೂ ಸುಖಪಡುವರು. ಯಂತ್ರವನ್ನು ನಾಶಮಾಡದೆ ಅದನ್ನು ಸರ್ವರ ಹಿತಕ್ಕಾಗಿ ಉಪಯೋಗಿಸಿ, ಅನಂತರ ಅನಂತ ಕಾಲದವರೆಗೂ ಸುಖಮಯ ನಿಶ್ಚಿಂತ ಸಮೃದ್ಧ ಶಕವೊಂದನ್ನು ಪ್ರಾರಂಭಿಸುವರು....ಮತ್ತೆ ಯಾರೂ ಬಡವರಾಗಿರಬೇಕಿಲ್ಲ.....



ಪಟ್ಟಶಿಷ್ಯರು: ಲೆನಿನ್ ಮತ್ತು ಸ್ಟಾಲಿನ್.

### ಕೂಲಿಕಾರ ಸರ್ವಾಧಿಕಾರ

ಈ ಕಲ್ಪನಾ ಸಾಮ್ರಾಜ್ಯ, ಕನಸಿನ ನಿರ್ದುಷ್ಟ ಸಮಾಜ, ಕೂಲಿಕಾರ ರಾಜ್ಯ ಬಂದೇ ತೀರುವದು. ಅದು ವಿಧಿಲಿಖಿತವೇ ಸೋಸರಿ. ಆದರೆ ಅದು ಬೇಗನೆ ಬರುವಂತೆ ಬಡವರು ಯತ್ನಿಸಬೇಕು. ಇದಕ್ಕೆ ಕ್ರಾಂತಿಯ ಸಾಧನ ಮಾರ್ಗವನ್ನು ವೇದಾಂತಿ ಮಾರ್ಕ್ಸ ಉಪದೇಶಿಸಿದನು. ಕ್ರಾಂತಿಕಾರರಿಗೆ ಅವನೇನೂ ನೀತಿ ನಿಯಮಗಳನ್ನು ಹಾಕಲಿಲ್ಲ. ನೀತಿಯೆಂಬದನ್ನೇ ಕಾರ್ಲ ಮಾರ್ಕ್ಸ "ಬೂರ್ಜ್ವಾ" (ಶ್ರೀಮಂತ ಸಮಾಜ) ಸಮಾಜದ ಭ್ರಾಂತಿಯೆಂದು ಕಡೆಗಣಿಸುತಿದ್ದನು. ಧರ್ಮವೆಂಬದು ಜನರನ್ನು ಮಂಕುಗೊಳಿಸುವ ಅಫು. ಬಂಡವಳಗಾರರಲ್ಲಿ ಸಮಸ್ತ ಹಿಂಸಾತ್ಮಕ ಸಾಧನಗಳೂ ಇವೆ. ಅವರ ಕೂಡ ಧರ್ಮಯುದ್ಧವೆಂಬದು ಬರಿ ಮರುಳು. ನ್ಯಾಯನೀತಿಯೆಂದು ನೋಡಿದರೆ ಕೂಲಿಕಾರರಿಗೆ ಪೂರೈಸುವಂತಿಲ್ಲ. ವರ್ಗರಹಿತ ಸಮಾಜವನ್ನು ಕಟ್ಟುವ ನ್ಯಾಯವಾದ ಕಾರ್ಯಕ್ಕಾಗಿ ಎಲ್ಲ ಬಗೆಯ ಅನ್ಯಾಯ, ಕುಟಿಲ, ಅಸತ್ಯ ಸಾಧನಗಳನ್ನು ಉಪಯೋಗಿಸಬೇಕಾದೀತು. ಅದಕ್ಕಾಗಿ ಕ್ರಾಂತಿಕಾರ ಹಿಂದೆಮುಂದೆ ನೋಡತಕ್ಕದ್ದಲ್ಲ. ಬರಿಗೈಯ ಕೂಲಿಕಾರರಿಗೆ ಮಾತೃಭೂಮಿಯೆಂಬದಿಲ್ಲ. ಬಂಡವಳಗಾರರು ತಮ್ಮ ಸ್ವಾರ್ಥಕ್ಕಾಗಿ ಹೂಡುವ ಯುದ್ಧಗಳಲ್ಲಿ ಮಾತೃಭೂಮಿಯ ಪ್ರೇಮವೆಂದು ಕೂಲಿಕಾರರು ಹೋರತಕ್ಕದ್ದಲ್ಲ. ಅಗ ಅವರು ಗುಪ್ತ ತಂತ್ರಮಾಡಿ ತಮ್ಮ ಸರಕಾರಗಳನ್ನು ನಾಶಮಾಡಬೇಕು. ಜಗತ್ತಿನ ಕೂಲಿಕಾರರೆಲ್ಲ ಒಂದಾಗಬೇಕು. ಬಂಡವಳಗಾರ ಸರಕಾರಗಳನ್ನು ತಲೆಕೆಳಗೆ ಮಾಡಿ ಕೂಲಿಕಾರರು ಅಧಿಕಾರವನ್ನು ಕಸಿದುಕೊಳ್ಳಬೇಕು. ಆ ಮೇಲೆ ಈಗಿರುವ ಸಾಮಾಜಿಕ ಭೇದಗಳನ್ನು ತೊಡೆದು ಹಾಕಲು ಒಂದು ಅವಧಿಯವರೆಗೆ ಕೂಲಿಕಾರ ಸರ್ವಾಧಿಕಾರವನ್ನು ಸ್ಥಾಪಿಸಬೇಕು. ಎಲ್ಲ ತಗ್ಗುದಿನ್ನೆ ಅಳಿದು ಬಂಡವಳಗಾರರು ನಾಶವಾದ ಬಳಿಕ ವರ್ಗಭೇದವಿಲ್ಲದ ಸಮಾಜದೊಡನೆ ಅನಂತ ಸುಖಶಾಂತಿ ಅಸ್ತಿತ್ವದಲ್ಲಿ ಬರುವದು. ಆ ಮೇಲೆ ಸರಕಾರವೇ ಬೇಕಾಗುವದಿಲ್ಲ. ಏಕೆಂದರೆ ಸರಕಾರವೆಂಬದು ಉಳ್ಳವರು ತಮ್ಮ ಸ್ವಾರ್ಥ ರಕ್ಷಣೆಗಾಗಿ ಮಾಡಿಕೊಂಡ ಯಂತ್ರ. ಸ್ವಾರ್ಥವೆಂಬವೇ ಇಲ್ಲದ, ಸ್ವಂತ ಆಸ್ತಿಗೆ ಅವಕಾಶವೇ ಇಲ್ಲದ ಸಾಂಘಿಕ ಜೀವನದಲ್ಲಿ ಸರಕಾರವೇಕೆ ಬೇಕು?

### ಕ್ರಾಂತಿಯ ಪ್ರಯತ್ನ

"ದೈವಜ್ಞ" ಮಾರ್ಕ್ಸನು ತನ್ನ ಭವಿಷ್ಯದ ಸತ್ಯಾಸತ್ಯತೆಯನ್ನು ಕಾಣಲು ಬದುಕಲಿಲ್ಲ. ಜೀವಮಾನವೆಲ್ಲ ಗುಪ್ತ ಕ್ರಾಂತಿಕಾರಿ ಚಟುವಟಿಕೆಯಲ್ಲಿ ಅವನು ಆಸಕ್ತನಾಗಿದ್ದ. ೧೮೭೧ ರ ಫ್ರೆಂಚ (ಪ್ಯಾರಿಸ್ ಕಮ್ಯೂನ್) ಕೂಲಿಕಾರ ಕ್ರಾಂತಿಯಲ್ಲಿ ಅವನ ಅಂಗವಿತ್ತೆಂದು ಸಂಶಯಪಡಲಾಗಿತ್ತು. ಆದರೆ ಅದು ಕ್ರಾಂತಿಕಾರರ ಕೆಲ ತಪ್ಪುಗಳಿಂದ ಅಯಶಸ್ವಿಯಾಯಿತು. ಮಾರ್ಕ್ಸನು ತನ್ನ ಕನಸು ನನಸಾಗುವದನ್ನು ಕಾಣದೆಯೆ ಕಡುಬಡತನದಲ್ಲಿ ಸತ್ತನು.

ಆದರೆ ಸತ್ತ ಮಾರ್ಕ್ಸನು ಜೀವಂತ ಮಾರ್ಕ್ಸನಿಗಿಂತ ಕಡಿಮೆ ಭಯಾನಕನಾಗಿರಲಿಲ್ಲ. ಅತ್ಯಂತ ಉದಾತ್ತವಾದೊಂದು ಧ್ಯೇಯವನು ಅತ್ಯಂತ ನಿರ್ದಯ ಸಾಧನ ಮಾರ್ಗದೊಡನೆ ಬೆರಸಿ ಇಸ್ಲಾಮದ ನಂತರ ಅತ್ಯಂತ ಪ್ರಭಾವಶಾಲಿ ಸಿದ್ಧಾಂತವೊಂದನ್ನು ಅವನು ಸ್ಥಾಪಿಸಿ ಹೋಗಿದ್ದ. ಅವನ ಭಯಂಕರ ತರ್ಕಶಕ್ತಿ ಕೂಲಿಕಾರರಿಗಿಂತ ಹೆಚ್ಚಾಗಿ, ಯಾವ ಬೂರ್ಜ್ವಾ ಇಲ್ಲವೆ ಶ್ರೀಮಂತನಾಗರಿಕ ವರ್ಗವನ್ನು ಅವನು ನಿರ್ನಾಮ ಮಾಡಬೇಕೆಂದು ವಾದಿಸಿದ್ದನೋ ಅದೇ ವರ್ಗದ ಸುಶಿಕ್ಷಿತ ತರುಣರ ಕಲ್ಪನೆಯನ್ನುಕೆಂಡವಾಗಿ ಮಾಡಿತು. ಎಲ್ಲ ಪ್ರಗತಿವಾದಿಗಳ ಮೇಲೂ ಮಾರ್ಕ್ಸನ ವಿಚಾರಗಳು ಸ್ವಲ್ಪಲ್ಲ ಸ್ವಲ್ಪ ಪ್ರಭಾವ ಬೀರದೆ ಇಲ್ಲ. ಮಾರ್ಕ್ಸನ ಅನುಯಾಯಿಗಳು ಕೂಲಿಕಾರರನ್ನು ಅವರ ಕಠೋರ ಐತಿಹಾಸಿಕ ಅದೃಷ್ಟದ ಸಿದ್ಧಿಗಾಗಿ ಸಂಘಟಿಸತೊಡಗಿದರು.

೧೯ ನೆ ಶತಕದ ಕೊನೆಯಲ್ಲಿ ಮಾರ್ಕ್ಸನ ಸಿದ್ಧಾಂತಕ್ಕೆ, ಕ್ರಾಂತಿಸಿದ್ಧಿಗೆ ಬೇಕಾದ ಬುದ್ಧಿಬಲ, ಕಠೋರ ನಿರ್ಧಾರ, ವಿಶಾಲ ಕಲ್ಪನೆಗಳುಳ್ಳ ಒಬ್ಬ ಅನುಯಾಯಿ ರಶಿಯದಲ್ಲಿ ದೊರಕಿದ. ಅವನೇ ವ್ಲಾಡಿಮಿರ್ ಇಲಿಚ್ ಉಲಿಯನಾವ್ ಅಥವಾ ಲೆನಿನ್. ರಶಿಯದಿಂದ ಅರಸೊತ್ತಿಗೆಯ ವಿರುದ್ಧ ಒಳಸಂಚು ಮಾಡಿದ್ದಕ್ಕಾಗಿ ಹೊರತಳ್ಳಲ್ಪಟ್ಟು ಸ್ವಿಝರ್ಲಂಡಿನಲ್ಲಿ ಕುಳಿತು ಅವನು ಕ್ರಾಂತಿಗಾಗಿ ಗೂಢತಂತ್ರಗಳನ್ನು ನಡೆಸುತಿದ್ದ. ೧೯೧೭ ರಲ್ಲಿ ಯುದ್ಧದಿಂದ ಬೇಸತ್ತ ರಶಿಯದ ಕೂಲಿಕಾರರನ್ನೂ ಸೈನಿಕರನ್ನೂ ಸಂಘಟಿಸಿ ಸರಕಾರವನ್ನು ಬುಡಮೇಲುಮಾಡಿ ಅವನು ಕೂಲಿಕಾರರಿಗಾಗಿ ಅಧಿಕಾರವನ್ನು ಕಸಿದುಕೊಂಡನು. ಕೂಲಿಕಾರ ಸರ್ವಾಧಿಕಾರವನ್ನು ಸ್ಥಾಪಿಸಿ ಮಾರ್ಕ್ಸನ ಸಿದ್ಧಾಂತಗಳನ್ನು ಆಚರಣೆಗೆ ತರಲು ಟೊಂಕಕಟ್ಟಿದನು. ಅವನ ಶಿಷ್ಯ ಸ್ಟಾಲಿನ್ನನ ಕೆಳಗೆ ರಶಿಯಾದ ಶಕ್ತಿ ಪ್ರಚಂಡವಾಗಿ ಬೆಳೆಯಿತು. ಮೊನ್ನಿನ ಯುದ್ಧದಲ್ಲಿ ಅದು ಜರ್ಮನಿಯ ವಿರುದ್ಧ ಜಯಶಾಲಿಯಾದುದರಿಂದ ಪೂರ್ವ ಯುರೋಪಿನ ರಾಜ್ಯಗಳೆಲ್ಲ ಕಮ್ಯುನಿಸ್ಟ ಪ್ರಭಾವಕ್ಕೊಳಗಾದವು. ಇಂದು ಬಲ್ಗೇರಿಯಾ ಯುಗೋಸ್ಲಾವಿಯಾ, ಅಲ್ಬೇನಿಯಾ ಇವು ಮೂರು ಪೂರ್ತಿ ಕಮ್ಯುನಿಸ್ಟ ರಾಜ್ಯಗಳಾಗಿ ಬಿಟ್ಟವೆ. ಝೆಕೊಸ್ಲೊವಾಕಿಯಾ, ರುಮೇನಿಯಾ ಹಂಗೇರಿ, ಪೋಲಂಡುಗಳಲ್ಲಿ ಹೆಸರಿಗೆ ಮಾತ್ರ ಬೇರೆ ಪಕ್ಷಗಳ ಸಹಕಾರದಿಂದ ಕಮ್ಯುನಿಸ್ಟರೇ ರಾಜ್ಯಭಾರ ಮಾಡುತಿದ್ದಾರೆ. ಏಶಿಯದಲ್ಲಿ ಹೊರ ಮಂಗೋಲಿಯಾದ ರಾಜ್ಯಭಾರ ಹೆಚ್ಚುಕಡಿಮೆ ಕಮ್ಯುನಿಸ್ಟ ಸಿದ್ಧಾಂತವನ್ನು ಅನುಸರಿಸಿದೆ. ಚೀನದಲ್ಲಿ ೧೦ ಕೋಟಿ ಜನಸಂಖ್ಯೆಯಷ್ಟು ಪ್ರದೇಶ ಕಮ್ಯುನಿಸ್ಟರ ಕೈಲಿದೆ.

### ಅಂತರ್‌ರಾಷ್ಟ್ರೀಯ ಚಳವಳಿ

ಕಮ್ಯುನಿಝಂ ಎಂಬದು ಅಂತರ್‌ರಾಷ್ಟ್ರೀಯ ಸಿದ್ಧಾಂತ. ಒಂದೇ ರಾಜ್ಯದಲ್ಲಿ

(೧೧ ನೇ ಪುಟಕ್ಕೆ)



ಪ್ರಶಿಷ್ಯರು [ಕಮ್ಯುನಿಸ್ಟ ದೇಶಗಳ ಪ್ರಧಾನ ಮಂತ್ರಿಗಳು]:— ಪೋಲಂಡಿನ ಜೋಸೆಫ ಸಿರಕಿವಿಚ್, ರುಮೇನಿಯದ ಗ್ರೋಜಾ, ಅಲ್ಬೇನಿಯದ ಜನರಲ್ ಹೋಝಾ, ಬಲ್ಗೇರಿಯದ ದಿಮಿಟ್ರಾವ್, ಯುಗೋಸ್ಲಾವಿಯದ ಮಾರ್ಶಲ್ ಟಿಟೊ, ಹಂಗೆರಿಯ ಲಾಜೋಸ್ ದಿನ್ಯೆಸ್, ಝೆಕೊಸ್ಲೊವಾಕಿಯದ ಗೊಟ್ವಾಲ್ಡ.

# ಜನಮತ

## ಸರಕಾರ ಕ್ಷಮೆ ಕೇಳಬೇಕೆ ?

ವಿಜಾಪುರ ತಾಲೂಕ ಕಬ್ಬಿಣ ಹಂಚಿಕೆ ಸಮಿತಿಯವರು ತಮ್ಮ ಕರ್ತವ್ಯವನ್ನು ಸರಿಯಾಗಿ ಮಾಡಲಿಲ್ಲೆಂದು ಮುಂಬಯಿ ಸರಕಾರವು ಅವನ್ನು ರದ್ದುಪಡಿಸಿರುವದಷ್ಟೆ. ವಿಜಾಪುರ ಜಿಲ್ಲಾ ಪುನರ್ಘಟಿತವಾದ ಗ್ರಾಮ ಸುಧಾರಣಾ ಸಮಿತಿಯ ಸಭೆ ಆಚೆಯ ವಾರ ಕಲೆಕ್ಟರರ ಅಧ್ಯಕ್ಷತೆಯಲ್ಲಿ ಸೇರಿದಾಗ ಈ ವಿಷಯವನ್ನು ಎತ್ತಲಾಯಿತು. ಈ ಸಮಿತಿಯನ್ನು ರದ್ದು ಪಡಿಸಿದ್ದೇಕೆ ಮುಂತಾದ್ದನ್ನು ತಿಳಿಸುವ ವರೆಗೆ ಈ ಸಭೆಯ ಕಾರ್ಯಕಲಾಪಗಳಲ್ಲಿ ಭಾಗವಹಿಸುವುದಿಲ್ಲೆಂದು ಬಹುಸಂಖ್ಯಾಕ ಸದಸ್ಯರು ಹೇಳಿದರು. ಈ ಸಂಬಂಧದಲ್ಲಿ ಸರಕಾರವು ಅಸಂದಿಗ್ಧ ರೀತಿಯಲ್ಲಿ ತಮ್ಮ ತಪ್ಪು ಒಪ್ಪಿ ಕ್ಷಮೆ ಬೇಡಿದ ಹೊರತು ಸರಕಾರದೊಡನೆ ಸಹಕರಿಸುವದಿಲ್ಲೆಂದು ಮತ್ತೊಬ್ಬ ಸದಸ್ಯರು ಹೇಳಿದರಂತೆ. ಸಭೆಯಲ್ಲಿ ಉಪಸ್ಥಿತರಿದ್ದ ಪಾರ್ಲಮೆಂಟರಿ ಸೆಕ್ರೆಟರಿಗಳಾದ ಶ್ರೀ ಕಂಠಿಯವರೂ ಕಲೆಕ್ಟರರೂ ಬಹಳಾದರೆ ಸರಕಾರದ ನಿರ್ಣಯವನ್ನು ಪುನರ್ವಿಮರ್ಶಿಸಲು ಕೇಳಿರಿ, ಕ್ಷಮೆ ಕೇಳಬೇಕೆಂದು ಆಗ್ರಹ ಹಿಡಿಯಬೇಡಿರೆಂದು ಕೇಳಿಕೊಂಡರೂ ಬಹುಸಂಖ್ಯಾಕ ಸದಸ್ಯರು ಸಭೆಯ ಕಾರ್ಯಕಲಾಪಗಳಲ್ಲಿ ಭಾಗ ವಹಿಸದೆ ಸಭೆ ಬಿಟ್ಟು ಹೊರಟು ಹೋದರು ಎಂದು ಮುಂತಾಗಿ ಪ್ರಸಿದ್ಧವಾಗಿದೆ. ಈ ಸಮಿತಿಯಲ್ಲಾದರೋ ಜಿಲ್ಲಾ ಕಾಂಗ್ರೆಸ ಸಮಿತಿಯ ಅಧ್ಯಕ್ಷರು, ಕಾರ್ಯದರ್ಶಿಗಳು, ಕಾಂಗ್ರೆಸ ಎಂ. ಎಲ್. ಎ.ಗಳು ಕಾಂಗ್ರೆಸ ಪಕ್ಷದಿಂದ ಜಿಲ್ಲಾ ಲೋಕಲ್ ಬೋರ್ಡಿಗೆ ಆರಿಸಿ ಹೋದ ಸದಸ್ಯರು ಇಷ್ಟೆಲ್ಲ ಜನರು ಇರುವರು. ಪ್ರಮುಖ ಕಾಂಗ್ರೆಸ್ಸಿಗರೇ ಕುಳಿತು ಕಾಂಗ್ರೆಸ ಸರಕಾರಕ್ಕೆ ಕ್ಷಮೆ ಕೇಳಬೇಕೆಂದು ಒತ್ತಾಯಪಡಿಸುವದು ಆಶ್ಚರ್ಯಕರವಲ್ಲವೆ ? ಇಂಥ ಸದಸ್ಯರಿಂದ ಹಳ್ಳಿಪಳ್ಳಿಗಳಲ್ಲಿ ಕಾಂಗ್ರೆಸ ಸರಕಾರದ ಆಜ್ಞೆಗಳು ಅದೆಂತು ಪ್ರಚಾರದಲ್ಲಿ ಬರುವವೊ? ಈ ವಿಷಯದ ಬಗ್ಗೆ ಕಾಂಗ್ರೆಸ ವರಿಷ್ಠರು ಮತ್ತು ಸರಕಾರದವರು ಗಂಭೀರ ರೀತಿಯಿಂದ ವಿಚಾರ ಮಾಡುವರೋ ?

—ಓರ್ವ ಕಾಂಗ್ರೆಸ್ಸಿಗ

* * *

## ಹಾಲಿನ ಪುಡಿಯ ತಮಾಷೆ

ಜನಸಾಮಾನ್ಯರನ್ನು ತೊಂದರೆಗೀಡು ಮಾಡಿ ಲಾಭ ಹೊಡೆಯುವವರ ಕೈ ತಡೆಯಬೇಕೆಂದು ನಾನು ಒಪ್ಪಿಕೊಳ್ಳುವೆ. ಆದರೆ ಇದರಲ್ಲಿ ಒಂದು ಕಣ್ಣಿಗೆ ಬೆಣ್ಣೆ, ಇನ್ನೊಂದಕ್ಕೆ ಸುಣ್ಣವೇಕೆ ? ಆಹಾರವಸ್ತುಗಳ ಮೇಲಿನ ನಿಯಂತ್ರಣ ಹೋಗುವ ಕಾಲಕ್ಕೆ ಸರಿಯಾಗಿ ಕರ್ನಾಟಕದ ಮೂರು ನಗರಗಳಲ್ಲಿ ಹಾಲಿನ ಉಪಯೋಗದ ನಿಯಂತ್ರಣ ಬಂತು. ಹಾಲಿನ ಪುಡಿ ಹೊರತು ತಾಜಾ ಹಾಲು ಉಪಯೋಗಿಸತಕ್ಕದ್ದಲ್ಲವೆಂದು ಹಾಟೆಲುಗಳಿಗೆ ಅಜ್ಞೆಯಾಯಿತು. ವಿನಿಯಂತ್ರಣದಿಂದ ಅಕ್ಕಿಯ ಬೆಲೆ ಇಮ್ಮಡಿಯಾದುದರಿಂದ ಬಡವರಿಗಾಗುವ ಕಷ್ಟಕ್ಕಿಂತಲೂ ಹಾಲು ದುರ್ಲಭವಾದುದರಿಂದಾದ ತೊಂದರೆ ಹೆಚ್ಚಾಯಿತೆ? ಸರಕಾರ ಪೂರೈಸುವ ಹಾಲಿನ ಪುಡಿಯ ಕೆಲ ಡಬ್ಬಿಗಳು ದುರ್ವಾಸನೆ ಹೊಡೆಯುತ್ತಿರುತ್ತವೆ. ಇದು ನಾಗರಿಕರ ಆರೋಗ್ಯ ರಕ್ಷಣೆಯ ಒಂದು ಅಂಗವೆ ? ಎಲ್ಲಕ್ಕಿಂತ ವಿಚಿತ್ರವೆಂದರೆ ಹಾಲಿನ ತೊಂದರೆ ಧಾರವಾಡ ಜಿಲ್ಲೆಯ ಮೂರು ನಗರಗಳಲ್ಲಷ್ಟೇ ಇಷ್ಟು ತೀಕ್ಷ್ಣವಾಗಿದೆಯೆಂಬ ಸರಕಾರದ ನಂಬಿಕೆ. ಉಳಿದ ಕೆಲ ನಗರಗಳಲ್ಲಿದ್ದ ಅಜ್ಞೆ ಏಕೆ ಹಿಂತೆಗೆದುಕೊಳ್ಳಲ್ಪಟ್ಟಿತು.?

—ಅರಿಯದವನೊಬ್ಬ

---

ಬದರಿನಾಥ ದೇವಾಲಯ ಸಮಿತಿಯ ಅಧ್ಯಕ್ಷರಾದ ಶ್ರೀ ಹರಗೋವಿಂದದಾಸ ಎಂ. ಎಲ್. ಎ. ಅವರ ನೇತೃತ್ವದಲ್ಲಿ ಒಂದು ಪಂಗಡವು ಜೂನ ತಾ ೨೩ಕ್ಕೆ ಅಲ್ಮೋರಾದಿಂದ ಮಾನಸ ಸರೋವರದಲ್ಲಿ ಮಹಾತ್ಮರ ಭಸ್ಮ ವಿಸರ್ಜನೆ ಮಾಡಲು ಕೈಲಾಸಕ್ಕೆ ಪ್ರಯಾಣ ಬೆಳೆಸಿತು. ಗಾಂಧೀಜಿಯವರು ೧೯೨೯ ರಲ್ಲಿ ಅನಾಸಕ್ತಿ ಯೋಗವನ್ನು ಎಲ್ಲಿ ಬರೆದರೊ ಆ ಪೌಸಾನಿ ಮತ್ತು ಬಾಗೇಶ್ವರಗಳಲ್ಲಿ ಹಾಯ್ದು ಈ ಗುಂಪು ಮುಂದೆ ಸಾಗಿತು.

# ವಿವಿಧ ಪ್ರಪಂಚ

## ಪಾಶ್ಚಾತ್ಯಗೃಹಸ್ಥನ ಫಜೀತಿ

ಭಾರತೀಯ ಸ್ತ್ರೀಯಲ್ಲಿ "ನೀಚೋಽಹಂ ಬುದ್ಧಿ" ಉದಯಿಸಲು ನಿನ್ನೆಯ ಪುರುಷಧರ್ಮ ಕಾರಣವಾದಂತೆ ಅಮೇರಿಕ ಮುಂತಾದ ಪಾಶ್ಚಾತ್ಯ ರಾಷ್ಟ್ರಗಳಲ್ಲಿ ಅಲ್ಲಿಯ ಇಂದಿನ ಪುರುಷಧರ್ಮದ ಫಲವಾಗಿ ಸ್ತ್ರೀಯರು ಸುಂದರೀಂಮನ್ಯರಾಗಿ, ಹಣ ಸುಲಿವ ಯಂತ್ರಗಳೂ ವಿಲಾಸ ದಾಸಿಯರೂ ಎನಿಸಿ, ಗೃಹಜೀವನದಲ್ಲಿ ಅಶಾಂತಿಪರ್ವಕ್ಕೆ ಕಾರಣರಾಗಿದ್ದಾರೆ. ಪಾಶ್ಚಾತ್ಯ ಸ್ತ್ರೀಗೆ ಗಂಡನು ಎಷ್ಟು ದುಡಿದುಹಾಕಿದರೂ ಸಾಲದೆಂಬ ಬುದ್ಧಿ ಉತ್ಪನ್ನವಾಗಲು ಅವಳನ್ನು ಅತಿ ಸ್ತುತಿಯಿಂದ ತಾಯಿಯೆಂದೂ ಮಕ್ಕಳನ್ನು ಅತ್ಯಾದರದಿಂದ ಅಕ್ಕ, ಅಣ್ಣನೆಂದೂ ಸಂಬೋಧಿಸಿ ಗೃಹಸ್ಥನು ವಿದೂಷಕನಂತೆ ವರ್ತಿಸುವುದರಲ್ಲೇ ಆನಂದ ಹೊಂದಿ ವ್ಯಕ್ತಿತ್ವವನ್ನು ಕಳೆದುಕೊಂಡದ್ದೇ ಕಾರಣ. ಅದರಿಂದಲೇ ಆ ರಾಷ್ಟ್ರಗಳು ಸ್ತ್ರೀಪರತ್ವವಾದಕ್ಕೆ ಎಡೆಗೊಟ್ಟು ಅತಿಭೋಗಿಗಳಾಗಿ ಅವನತಿಯ ಹಾದಿಯಲ್ಲಿ ಮುನ್ನಡೆ ಇಡತೊಡಗಿವೆಯೆಂಬುದನ್ನು ಮಹಾಯುದ್ಧದ್ವಯ ಆಗಲೇ ನಮ್ಮ ನಿದರ್ಶನಕ್ಕೆ ತಂದಿವೆ.

ಅಮೇರಿಕದ ವಿದ್ವಾಂಸರಾದ ನರನಾರಿಯರು ಕುಟುಂಬ ಜೀವನದ ಶ್ರಾದ್ಧವಾಗಿದೆಯೆಂದು ಗೋಳಾಡಲು ಮೇಲಿನ ಅವರ ಧರ್ಮವೇ ಕಾರಣವಾಗಿದೆ. ಸುಖದುಃಖದಲ್ಲಿ ಸಹಭಾಗಿಯಾಗದವಳು ಸಹಧರ್ಮಿಣಿಯೆಂದೂ ಸಹಭಾಗಿಯಾಗದವ ಸಹಧರ್ಮಿಯೆಂದೂ ಹೇಳಲೆಂತು ಸಾಧ್ಯವಾದೀತು? ಗಂಡಹೆಂಡಿರು ಒಟ್ಟು ಒಂದು unit ಸಾಮಾಜಿಕ ಮಾಪು ಎಂದು ಅವರಿಬ್ಬರೂ ತಿಳಿದರೆ ಇಬ್ಬರ ಆಕ್ರಮಣಶೀಲತೆಯೂ ನಾಶವಾಗಿ ಔದಾರ್ಯ ಸಹಕಾರ ಭಾವನೆಗಳು ಉದಯಿಸಿ ಸುಖವುಂಟಾಗುತ್ತದೆ. ಐದು ಬೆರಳುಗಳು ಪರಸ್ಪರ ಕಲಹವನ್ನಾರಂಭಿಸಿದರೆ ಅವುಗಳಿಂದ ಯಾವ ಕಾರ್ಯ ಸಾಧ್ಯವಾದೀತು? ಅದೇ ರೀತಿಯಲ್ಲಿ ಪ್ರಕೃತಿ ವಿಜ್ಞಾನದ, ಸಮಾಜಶಾಸ್ತ್ರದ, ಶರೀರ ಮತ್ತು ಮನಃಶಾಸ್ತ್ರಗಳ ಅಭಿಪ್ರಾಯದಂತೆ ಸ್ತ್ರೀಪುರುಷರು ಸ್ವಸ್ಥಾನ ಜ್ಞಾನವುಳ್ಳವರಾಗಿ ವೈಷಮ್ಯೋದ್ಘಾಟನ ದೃಷ್ಟಿಯನ್ನು ಬಿಟ್ಟುಕೊಟ್ಟರೆ ಮಾತ್ರ ಸುಖಶಾಂತಿಗಳನ್ನು ಕಂಡಾರು.

ಭಾರತದಲ್ಲಿಂದು ಸ್ವತಂತ್ರ ವಿಚಾರದ ಹೆಸರಿನಲ್ಲಿ ಪಾಶ್ಚಾತ್ಯ ವಿಚಾರಗಳನ್ನು ವಿಮರ್ಶೆ ಮಾಡದೆ, ಹಾಗೆಹಾಗೇ ತೆಗೆದುಕೊಂಡು ಜೀವನದಲ್ಲಿ ಆಚರಿಸುವ ದುರ್ಬುದ್ಧಿ ಅಲ್ಲಲ್ಲಿ ಕಂಡುಬರುತ್ತಿದೆ. ಇದರಿಂದ ಪಾಶ್ಚಾತ್ಯರಂತೆಯೇ ನಾವು ಕಡೆಗೊಮ್ಮೆ ಪಶ್ಚಾತ್ತಾಪಪಡುವ ಕಾಲ ಬಂದೀತೆಂಬುದನ್ನು ಗಮನಿಸಿ ಉಭಯ ದೋಷಗಳನ್ನು ದೂರವಿಟ್ಟು ನಿಜವಾದ ನಾಗರಿಕ ಮಾನವ ವಿಚಾರವನ್ನು ಅಳವಡಿಸಿಕೊಳ್ಳಲು ಇಂದಿನ ಪ್ರಗತಿಪರ ವಿಚಾರಶೀಲರು ಪ್ರಯತ್ನಿಸುವುದು ಅತ್ಯಗತ್ಯವಲ್ಲವೆ?

## 'ಹಲ್ಲಿತಿಂದ ರೋಗ'

ಒಬ್ಬ ಆಂಗ್ಲೋ ಇಂಡಿಯನ್ ಹುಡುಗಿ ಕಾನ್ವೆಂಟನಲ್ಲಿ ಓದುತ್ತಿದ್ದಳು. ಅಲ್ಲಿ ಅವಳು ಓದಾಳುಗಳಲ್ಲಿ ಅಗ್ರೇಸರಳೆನಿಸಿ ಮಾನ್ಯತೆ ಪಡೆದು ಎಲ್ಲರ ದೃಷ್ಟಿಗೂ ಬಿದ್ದಿದ್ದಳು. ಆಕೆಗೆ ಮದುವೆಯಾಯಿತು. ತಾನು ಆದರ್ಶ ರಮಣಿ ಎಂಬ ಅಹಂಕಾರ ಅವಳಲ್ಲಿ ಮೂಡಿದ್ದು, ಅದರಂತೆ ಸಮಾಜ—ಅದರಲ್ಲೂ ತನ್ನ ಗಂಡ—ಮನ್ನಣೆ ಕೊಡದುದರಿಂದ ಮುಖಭಂಗ ಹೊಂದಿದ ಮಾನಧನ ದುರ್ಯೋಧನನಂತೆ ಬುಸುಗುಡಲಾರಂಭಿಸಿ ಡಾಕ್ಟರರೊಬ್ಬರ ಮನೆಯಲ್ಲಿ ಹೋಗಿ ಇರತೊಡಗಿದಳು. ಆಗ ಡಾಕ್ಟರರು ಅವಳ ಹಿಂದಿನ ಜೀವನೇತಿಹಾಸವನ್ನು ಕೇಳಿ ತಿಳಿದುಕೊಂಡು ಸತ್ಯ ಪ್ರಪಂಚದಲ್ಲಿ ಅವಳ ಸ್ಥಾನವೇನೆಂಬುದನ್ನು ವಿಶದಪಡಿಸಿ ಅವಳ ಶ್ರೇಷ್ಠೋಹಂಬುದ್ಧಿಯನ್ನು ನಿರಾಸಗೊಳಿಸಲು ಯತ್ನಿಸಿದರು. ಆಗ ಅವಳಿಗುಂಟಾದ ಅತೃಪ್ತಿ, ಅಸಮಾಧಾನ, ನಿರಾಶೆ, ಇವುಗಳ ಫಲವಾದ ಕ್ರೋಧ, ಚಿಂತೆ ಈ ಮನೋರೋಗಗಳು ಮಾಯವಾಗಬಹುದೆಂದು ಅವರ ಆಸೆಯಿತ್ತು. ಆದರೆ ಅದು ಮಿತಿಮೀರಿದ ಪ್ರಕರಣವಾದುದರಿಂದ ಅವಳನ್ನು ಹುಚ್ಚರ ಆಸ್ಪತ್ರೆಗೆ ಕಳುಹಬೇಕಾಯಿತು.

ಅವಳ 'ಹಲ್ಲಿ ತಿಂದ ರೋಗ' ಹೀಗಿತ್ತು: ತನ್ನ ಸಹಜಮೂಲ್ಯವನ್ನು ಅರಿತುಕೊಳ್ಳಲಾರದ ಅವಳು ಗಂಡನ ಮೇಲೆ ಮತ್ತು ಅವನ ಸಂಬಂಧಿಗಳ ಮೇಲೆ ದುರುದ್ದೇಶದ ಆರೋಪ ಹೊರಿಸಿದಳು; ಕಲ್ಪನಾವಿಲಾಸದಲ್ಲಿ ಭ್ರಮಣ ಮಾಡಿ ಅವಳು ಗಾಳಿಗೋಪುರದಿಂದ ಉರುಳಿದ ಅಪ್ಸರೆಯೆಂದು ತನ್ನನ್ನು ಭಾವಿಸಿಕೊಂಡು, ಒಂದು ಪಾರಿವಾಳವು ರಾತ್ರಿ ಮಲಗಿದಾಗ ತಲೆದೆಸೆಯಲ್ಲಿ ಬಂದು ವಾತ್ಸಲ್ಯ ಕರುಣೆಗಳನ್ನು ಸೂಸುವ ಸ್ವರದಿಂದ ಸುತ್ತಲೂ ಹಾರುತ್ತ ತಾನು ಅನುಭವಿಸುತ್ತಿರುವ ಪೀಡೆಗಳಿಗೆ ಕನಿಕರಿಸಿ ಸಂತೈಸುತ್ತಿರುವಂತೆ ಹಗಲುಗನಸು ಕಾಣುತ್ತಿದ್ದಳು. ಅದರಿಂದ ದಿನೇ ದಿನೇ ಭ್ರಾಂತಿವೃದ್ಧಿಯಾಗಿ ಚಿತ್ತವಿಕಾರವು ಸ್ಥಾಯಿಯಾಗುವಂತಾಯಿತು.

(ಎಡದಿಂದ ಬಲಕ್ಕೆ) ಸ್ಕಾಟಲೆಂಡಿನ ಮಂತ್ರಿ ವುಡ್‌ಬರ್ನ್, ಕೂಲಿಕಾರ ಮಂತ್ರಿ ಜಾರ್ಜ ಐಜಾಕ್ಸ್ ಎಂಬೀರ್ವರ. ಸ್ಕಾರ್ಬರೋ ಮರಳುದಿಣ್ಣೆಯಲ್ಲಿ ಇತ್ತೀಚಿನ ಕೂಲಿಕಾರ ಪಕ್ಷದ ಸಮ್ಮೇಲನಕ್ಕೆ ಹೋದಾಗ ಬೆಳಗಿನ ವ್ಯಾಯಾಮವನ್ನ ತೆಗೆದುಕೊಳ್ಳುತ್ತಿರುವುದು. ಅನುಕರಣೀಯ ವಲ್ಲವೇ ಇದು ?

## ಐತಿಹಾಸಿಕ ಅವಶೇಷಗಳು

ಬಳ್ಳಾರಿಯ ಸಂಗನಕಲ್ಲು ಗುಡ್ಡದ ಹತ್ತಿರ ಶ್ರೀ ಬಿ. ಸುಬ್ಬರಾಯರು ನಡೆಸಿದ ಭೂಗರ್ಭ ಸಂಶೋಧನೆಯಲ್ಲಿ ಶಿಲಾಯುಗದ ಅವಶೇಷಗಳು ಸಿಕ್ಕಿವೆ. ಕಲ್ಲಿನ ಆಯುಧಗಳಲ್ಲಿ ಕೊಡಲಿ, ಉಳಿ, ಪಿಕಾಸು, ಗುದ್ದಲಿ ಮುಂತಾದವು ಮುಖ್ಯವಾದವು. ಈ ಭೂತಲದ ಕೆಳಗೆ ೪೦೦೦ ವರ್ಷಗಳ ಹಿಂದಿನ ಚಿಕ್ಕ ಆಕೃತಿಯ ಆಯುಧಗಳು ದೊರೆತವು ಮತ್ತು ಸುಮಾರು ೬೦೦೦ ವರ್ಷಗಳ ಹಿಂದಿನವೆಂದು ನಂಬಲಾದ ಮೂಲ ಶಿಲಾಯುಗದ ಆದಿಯ ಕೆಲವು ಕಲ್ಲು ಹಲಗೆಗಳೂ ಲಭಿಸಿದವು.

ಮೇಲಿನ ಅವಶೇಷಗಳು ಮೈಸೂರಿನ ಬ್ರಹ್ಮಗಿರಿಯ ಸಂಶೋಧನದಲ್ಲಿ ತಿಳಿದು ಬಂದ ಅಂಶಗಳನ್ನು ಪುಷ್ಟೀಕರಿಸುತ್ತವೆ. ಅವಶೇಷಗಳಲ್ಲಿ ಕಲ್ಲಿನ ಮರೆಗಳು, ಕಂಬಗಳು, ಮತ್ತು ವೃತ್ತಾಕಾರದ ಸಮಾಧಿ ಸ್ಥಳಗಳು, ಉದ್ದನೆಯ ಮಣಿಗಳು, ಬಣ್ಣ ಹಚ್ಚಿದ ಗಡಿಗೆ ಮಡಿಕೆಗಳು, ಕೊಳ್ಳಿಗಳು, ಕಲ್ಲಿನ ಚಿತ್ರಗಳು ಮುಖ್ಯವಾದವು. ಈ ಅವಶೇಷಗಳು ಲಭ್ಯವಾದುದರಿಂದ ಬಳ್ಳಾರಿಯು ದಕ್ಷಿಣ ಹಿಂದುಸ್ತಾನದಲ್ಲಿ ಒಂದು ಪ್ರಮುಖವಾದ ಹೊಸ ಶಿಲಾಯುಗದ ಕೇಂದ್ರವೆನಿಸುವಂತಾಯಿತು.

## ಸೌಂದರ್ಯಶಾಸ್ತ್ರದಿಂದ

ಸತ್ಯ, ಸೌಂದರ್ಯ ಮತ್ತು ಸಜ್ಜನಿಕೆ ಎಂಬ ಮೂರು ಭಾವನೆಗಳನ್ನು ಪಾಶ್ಚಾತ್ಯ ವಿದ್ವಾಂಸರು ಅನೇಕ ಗ್ರಂಥಗಳಲ್ಲಿ ವಿಮರ್ಶಿಸಿದ್ದಾರೆ. ಆದರೆ ಅವರೆಲ್ಲರೂ ಒಂದನ್ನು ಮರೆತಿದ್ದಾರೆ— ಇವು ಗುಣಗಳಲ್ಲದೆ ಪದಾರ್ಥವಲ್ಲ ಎಂಬುದನ್ನು! ಇದರಿಂದ ಅನೇಕ ಸಿದ್ಧಾಂತಗಳು ಹುಟ್ಟುವಂತಾಗಿದೆ. ಇತ್ತೀಚೆಗೆ ಅಟ್ಲಾಂಟಿಕ್ ಪತ್ರಿಕೆಯಲ್ಲಿ ಇಟಲಿಯ ಸಾಂತಾಯನರೆಂಬ ವಿದ್ವಾಂಸರ ಪ್ರಬಂಧವನ್ನು ಕೊಡಲಾಗಿದೆ. ಅದರಲ್ಲಿ ಅವರು ಸಾಕ್ರೆಟೀಸನ ಬಾಯಿಂದ ಸೌಂದರ್ಯವೆಂಬುದು ದೈವೀ ಶಕ್ತಿಯ ಆವಿರ್ಭಾವ, ಅವಯವಸಾಮಂಜಸ್ಯ ಅದರ ಹೊರ ಆವರಣ, ಅರ್ಥಾತ್ ಗೌಣ; ಆಂತರಿಕವಾದ ಆತ್ಮಸೌಂದರ್ಯವನ್ನು ಅವರು ಪ್ರಕಾಶಿಸಿದಾಗ ಮಾತ್ರ ಅದು ನಿಜ ಸೌಂದರ್ಯವೆನಿಸುತ್ತದೆ; ಇಲ್ಲದಿದ್ದರೆ ಅದೊಂದು ಚರ್ಮಕಾಪಟ್ಯ, ತೊಗಲುಮೋಸ ಎಂಬ ಪ್ರಾಚೀನ ಅಭಿಪ್ರಾಯವನ್ನೂ ಮತ್ತೊಂದು ಪಾತ್ರದ ಮುಖೇನ ಸೌಂದರ್ಯ ಒಂದು ದುಷ್ಪರಿಣಾಮಕಾರಿಯಾದ ಶಸ್ತ್ರ, ಅದು ಹೆಂಗಸಿನಲ್ಲಿದೆ: ಅಥವಾ ಅದು ತನ್ನ ಆತ್ಮ ಸೌಂದರ್ಯ ಪ್ರಕಾಶನ ಮಾಡದಿರಬಹುದು, ಅದು ತಾನೇ ತಾನು, ಗುಣ ಸಂಸ್ಕಾರ ಸಂಬಂಧದಿಂದ ಸ್ವತಂತ್ರ—ಎನ್ನಿಸಿದ್ದಾರೆ.

ಭಾರತೀಯ ವಿಚಾರಪರಂಪರೆಗೂ ಸಾಕ್ರೆಟೀಸ ಪಾತ್ರದ ವಿಚಾರಸರಣಿಗೂ ಭೇದವಿಲ್ಲ. ೨ ನೆಯ ಪಾತ್ರ ನುಡಿದದ್ದು ಇಂದಿನ ಪಾಶ್ಚಾತ್ಯ ವಿಲಾಸದಾಸರ ಫ್ರಾಯ್ಡ್ ಸಿದ್ಧಾಂತಬದ್ಧವಾದ ವಿಮರ್ಶೆಯೆಂಬುದು ಸುಸ್ಪಷ್ಟ. ಪದಾರ್ಥಕ್ಕೆ ಸ್ವತಃ ಮೌಲ್ಯವಿಲ್ಲ, ವೃದ್ಧ ವ್ಯವಹಾರ, ಅನುವ್ಯವಸಾಯ ಮುಂತಾದವು ಕೊಟ್ಟ ಸಂಸ್ಕಾರದಿಂದ ಅದಕ್ಕೆ ಪ್ರಾಪಂಚಿಕ ಬೆಲೆ ಬರುತ್ತದೆ. ಈ ತತ್ವವನ್ನು ಆಧರಿಸಿಯೇ ಐ. ಏ. ರಿಚರ್ಡ್ಸರು ದೃಷ್ಟಿಯಲ್ಲಲ್ಲದೆ ಸೃಷ್ಟಿಯಲ್ಲಿ ಸೌಂದರ್ಯವಿಲ್ಲ ಎಂದುದು. ಇದಕ್ಕೆ ನಿದರ್ಶನವೆಂದರೆ, ಕವಿಗಳು ದುಂಬಿಯ ಬಗ್ಗೆ ಬರೆದಷ್ಟು ಗೀತಗಳನ್ನು ಕತ್ತೆಯ ಮರಿಯ ಬಗ್ಗೆ ಬರೆಯಲಿಲ್ಲ ಎಂಬುದು. ಕವಿಸಮಯ ಎಂಬುದನ್ನು ಜನಸಮಯ ಅನುಸರಿಸಿ ನಿಲ್ಲುತ್ತದೆ. ಪ್ರಾಪಂಚಿಕ ಅನುಭವವು ಒಂದು ಅಧ್ಯಾಸ ಎಂದು ನಮ್ಮ ತತ್ವಜ್ಞರ ಅನುಭವ ರಹಸ್ಯದಂತೆ ಹೇಳಬೇಕಾದರೆ ಸತ್ಯ, ಸೌಂದರ್ಯ, ಸಜ್ಜನಿಕೆ ಮತ್ತು ಪ್ರೀತಿಗಳು ಗುಣವರ್ಗಕ್ಕೆ ಸೇರಿದವು; ಜ್ಞಾನವೆಂಬ ಒಂದೇ ಪದಾರ್ಥದ ನಾಲ್ಕು ಮುಖಗಳು. ಅಸತ್ಯ ಅಸೌಂದರ್ಯ, ಅಸಾತ್ವಿಕತೆ, ಅಪ್ರೀತಿಗಳು ಇಲ್ಲವೆ ಇಲ್ಲ; ತಾರತಮ್ಯದಿಂದ ಅವು ಸಂದರ್ಭದ ಕಟ್ಟನಲ್ಲಿ ಸಿಕ್ಕಿ ನಮ್ಮ ಸಾಮಾನ್ಯ ದೃಷ್ಟಿಗೆ ಗೋಚರಿಸುವಂಥವು ಎಂಬುದು ಆಧುನಿಕ ಸ್ವತಂತ್ರ ವಿಚಾರಿಗಳ ಸಿದ್ಧಾಂತ.

## ಓದಬಲ್ಲವ

ಓದಬಲ್ಲವನೆಂದರೆ ಯಾರು? ಎಲ್ಲರೂ ಓದುತ್ತಾರೆ. ಈಗಿನ ಕಾಲದಲ್ಲಿ ಆ ಓದಿಕೆ ಓದಿಕೆಯೆ? ಅಲ್ಲವೆನ್ನುತ್ತಾರೆ ಬಲ್ಲವರು.

Good reading is the Criterion of good judgment- ಸರಿಯಾಗಿ ಓದುವದೇ ಸರಿಯಾದ ವಿಮರ್ಶೆಯ ನಿಕಷ ಎಂದು ಪ್ರಸಿದ್ಧ ಆಂಗ್ಲ ವಿಮರ್ಶಕರಾದ ರಿಚರ್ಡ್ಸ್‌ರೆನ್ನುತ್ತಾರೆ. ನಿಮಿಷಕ್ಕೆ ೨೫೫ ಶಬ್ದಗಳನ್ನು ಓದುವವ ಸಾಮಾನ್ಯ, ನಿಪುಣನು ನಿಮಿಷಕ್ಕೆ ೫೦೦ ಶಬ್ದಗಳನ್ನು ಓದಬಲ್ಲನೆಂದು ಪಂಡಿತರ ಮತ. ಅದೇ ನಿಜವಾದ ವೇಗ.

ಓದೆಂದರೆ ಕೇವಲ ಶಬ್ದಪಠನವಲ್ಲ; ಪಠನವಿಲ್ಲದೆಯೇ ಎಂಬಷ್ಟು ವೇಗವಾಗಿ ಅರ್ಥಗ್ರಹಣಮಾಡುವದು. ಹೆಚ್ಚು ಹೆಚ್ಚು ಓದಿದಷ್ಟು, ಬೇಗ ಬೇಗ ಓದಬರುವದು, ಬೇಗ ಬೇಗ ಓದಿದಷ್ಟು, ಓದಿನ ಆನಂದ ಹೆಚ್ಚಾಗುವದು. ಬಾಯಿಯಲ್ಲಿ ಉಚ್ಚರಿಸದೆ, ತುಟಿಗಳನ್ನು ಅಲ್ಲಾಡಿಸದೆ, ಗಂಟಲನ್ನು ಕೂಡ ಅಲುಗಿಸದೆ ಮನಸ್ಸಿನಲ್ಲಿಯೇ ಓದುವದರಿಂದ ವೇಗವನ್ನು ಹೆಚ್ಚಿಸಿಕೊಳ್ಳಬಹುದು. ಅರ್ಥಗ್ರಹಣಶಕ್ತಿಯನ್ನೂ ಬೆಳೆಸಿಕೊಳ್ಳಬಹುದು. ನಮ್ಮಲ್ಲಿ ಎಷ್ಟು ಜನರಿಗೆ ಸರಿಯಾಗಿ ಒಂದು ದಿನಪತ್ರಿಕೆಯನ್ನು ಓದಲು ಬರುತ್ತದೆ ?

## ವ್ಯಾಪಾರ ಪ್ರಪಂಚ

### ಮುಂಬಯಿ ಶೇರ ಪೇಟೆ

ತಾ. ೨೯

ಮುಂಬಯಿ ಶೇರ ಪೇಟೆಯಲ್ಲಿ ಟಾಟಾ ಸ್ಟೀಲ ಡೆಫರ್ಡ ಪಾಲುಗಳ ಪರಿವರ್ತನೆಯ ವಿಷಯದಲ್ಲಿ ಬಿಕ್ಕಟ್ಟುಂಟಾದ ಪರಿಣಾಮವಾಗಿಯೂ ಜಮಸೇದಪುರದಲ್ಲಿ ಉಕ್ಕಿನ ತಯಾರಿ ಅಷ್ಟು ಹೆಚ್ಚಾಗಿಲ್ಲವೆಂಬ ಸುದ್ದಿಯ ಕಾರಣದಿಂದಲೂ ಅದರ ಬೆಲೆ ಇಳಿದಿದೆ. ಪೇಟೆಯಲ್ಲಿ ಅಷ್ಟು ಹುರುಪಿಲ್ಲ. ಇಂದಿನ ಕೊನೆಯ ಬೆಲೆಗಳು ಇಂತಿವೆ:

**ಜವಳಿ**

| | |
|---|---|
| ಬಾಂಬೆ ಡಾಯಿಂಗ್ | ೧೦೭೭–೦–೦ |
| ಸೆಂಟ್ರಲ ಇಂಡಿಯಾ | ೨೯೩–೦–೦ |
| ಸೊಂಡುರಿ | ೫೧೦–೦–೦ |
| ಗೋಕಾಕ | ೩೧೨–೦–೦ |
| ಕೋಹಿನುರು | ೬೧೮–೮–೦ |
| ಫಿನಿಕ್ಸ | ೨೦೭–೦–೦ |
| ಸ್ವದೇಶಿ | ೬೦೪–೦–೦ |

**ಇತರ**

| | |
|---|---|
| ಬೇಲಾಪುರ ಸಕ್ಕರೆ | ೨೮೬–೦–೦ |
| ಬಾಂಬೇ ಬರ್ಮಾ | ೪೨೭–೦–೦ |
| ಟಾಟಾ ಸ್ಟೀಲ ಡೆಫರ್ಡ | ೧೫೫೬–೦–೦ |
| ಸಿಂಧ್ಯ ಸ್ಟೀಮ | ೨೬–೧೩–೦ |
| ಅಸೊ. ಸಿಮೆಂಟ್ಸ | ೧೬೮–೦–೦ |
| ಸೆಂಟ್ರಲ ಬ್ಯಾಂಕ | ೮೮–೪–೦ |
| ಇಂಪೀರಿಯಲ್ ಬ್ಯಾಂಕ ಪೂರ್ಣ | ೨೦೫೫-೦-೦ |
| ಇಂಡಿಯನ್ ಬ್ಯಾಂಕ | ೨೦೪-೦-೦ |
| ರಿಝರ್ವ ,, | ೧೧೧–೦–೦ |

### ಚಿನ್ನ--ಬೆಳ್ಳಿ

ಚನಿವಾರ ಕಟ್ಟೆಯಲ್ಲಿ ಕಳೆದವಾರ ಹೊಸ ಚಿನ್ನ ಬಂದದ್ದರಿಂದ ಇಳಿದ ಬೆಲೆಗಳು ಮುಂದೆ ಸುಧಾರಿಸಿ ಈಗ ಅಷ್ಟೇನೂ ಬದಲಾವಣೆಯಿಲ್ಲದೆ ಕೆಲ ಆಣೆ ಅತ್ತಿತ್ತ ಹೊಯ್ದಾಡುತ್ತಿದೆ. ೧೧೫ ರ ಮೇಲೆ ಈ ಆಣೆಗಳು ಇಳಿದ್ದ ಚಿನ್ನದ ಬೆಲೆ ಈ ಕೆಳಗಿನಂತೆ ತಾ. ೧ ಕ್ಕೆ ಇತ್ತು:-

| | |
|---|---|
| ತಯಾರಿ ಚಿನ್ನ | ೧೧೪–೧೫–೦ |
| ವಾಯದಾ ಚಿನ್ನ | ೧೧೪–೯–೦ |
| ಸಾವರೀನ | ೭೫–೦–೦ |
| ತಯಾರಿ ಬೆಳ್ಳಿ | ೧೭೪–೩–೦ |
| ವಾಯದಾ | ೧೭೪–೫–೦ |
| ಚೆಂಬರ | ೧೭೩.೧೦-೦ |

### ಅರಳೆ

ಜುಲೈ ವಾಯದೆಯನ್ನು ತೀರಿಸುವ ಕಾಲ ಇಷ್ಟರಲ್ಲೇ ಬರಲಿದ್ದು ಅದರಲ್ಲಿನ ವ್ಯಾಪಾರ ಅಷ್ಟೇನು ಆಕರ್ಷಕವಾಗಿಲ್ಲ. ಸೆಪ್ಟೆಂಬರ ಒಂದೇ ಆಕರ್ಷಕವಾಗಿದೆ. ಅರಳೆ ಪೇಟೆಯ ಬೆಲೆಗಳು ಬಹಳ ಅಂತರ ಹೊಂದುತ್ತಿವೆ. ಜುಲೈ ೬೭೩–೮–೦ ರ ವರೆಗೂ ಹೋಗಿತ್ತು. ತಾ. ೧ ರ ಬೆಲೆಗಳು ಇಂತಿದ್ದವು.

| | |
|---|---|
| ಜುಲೈ | ೬೫೩-೮-೦ |
| ಸೆಪ್ಟೆಂಬರ | ೬೩೮-೦-೦ |

### ಎಣ್ಣೆಕಾಳು

| | |
|---|---|
| ಶೇಂಗಾ | ೧೮೧-೪-೦ |
| ,, (ಹೊಸ) | ೧೭೭-೪-೦ |
| ಅಗಸಿ | ೨೭–೧೩.೦ |
| ,, ಎಣ್ಣೆ | ೧೬–೬–೦ |

### ಶಿವಮೊಗ್ಗ ಅಡಿಕೆ

ತಾ. ೩೦

| | | |
|---|---|---|
| ದೇಶಾವರ ನಂ. ೧ ಮಣ ೧ ಕ್ಕೆ | | ೩೪-೩೫ |
| ,, ,, | ೨ | ೩೦-೩೧-೩೩ |
| ಕೊಪ್ಪ ಶೃಂಗೇರಿ | | ೨೯-೩೦-೩೨ |
| ಬೀರೂರು ತುಡುಕಿ | | ೩೧-೩೩ |
| ತೊರೆಸಾಲು ,, | | ೨೬-೨೮-೩೦ |
| ದೇಶಾವರ ಬೆಟ್ಟೆ | | ೧೮-೨೦ |
| ಮೆಣಸಿನ ಕಾಳು | | ೩೭-೩೮ |

### ಸಾಂಗಲಿ

ತಾ. ೨೯

| | |
|---|---|
| ಅರಸಿನ (ಹೊಸ) ಹೇರು | ೧೧೬-೧೨೧ |
| ಶೇಂಗಾ ಖಂಡಿ | ೧೪೧.೦–೦ |
| ಮೆಣಸಿನಕಾಯಿ ಹೇರು | ೧೫೦—೨೦೦ |
| ಬೆಲ್ಲ ಹೇರು | ೩೦–೫೫ |

### ಹುಬ್ಬಳ್ಳಿ

| | | |
|---|---|---|
| ಜಯವಂತ ಹತ್ತಿ | ೧ | ೪೩೦-೪೮೦ |
| ,, | ೨ | ೪೦೦-೪೧೫ |
| ,, | ೩ | ೩೬೦-೩೮೫ |
| ಅಪಲಂಡ ಹತ್ತಿ | ೧ | ೪೨೫-೪೩೦ |
| ,, | ೨ | ೪೧೫-೪೨೦ |
| ಜಿನ | | ೩೧೫-೩೨೫ |
| ಅ. ಡಬಲರೋಲ | | ೨೯೫-೩೦೫ |
| ಸಾಜಿನ | | ೨೮೦—೨೯೦ |
| ಜ. ಹತ್ತಿಕಾಳು | | ೮॥ ಪೌಂ. |
| ಡ. ಹತ್ತೀಕಾಳು | | ೮॥ ,, |

## ನಾಲ್ಕು ಮಾತು — ರಂಗನಾಥ ದಿವಾಕರ

### ೧ ವಿಧಾಯಕ ಕಾರ್ಯಕರ್ತರ ಸಮ್ಮೇಲನ

ಕರ್ನಾಟಕದ ಈ ಸಮ್ಮೇಲನವು ೨೭-೨೮ ಹೀಗೆ ಎರಡು ದಿನ ಹುಬ್ಬಳ್ಳಿಯಲ್ಲಿ ನಡೆಯಿತು. ಕರ್ನಾಟಕದಲ್ಲಿಯ ವಿಧಾಯಕ ಕಾರ್ಯವನ್ನು ಸಂಘಟಿಸುವ ಎರಡನೆ ಪ್ರಯತ್ನವಿದು. ಕೇವಲ ಸಮ್ಮೇಲನಗಳಿಂದ ಈ ಸಂಘಟನೆ ಆಗದು ಎಂಬುದು ಸಿದ್ಧವು. ಒಂದು ಸ್ಥಾಯೀ ಸಮಿತಿಯು ದಿಕ್ಕನ್ನು ದುಡಿದೇ ಈ ಸಂಘಟನೆಯನ್ನು ಸಾಧಿಸಲಿಕ್ಕೆ ಬೇಕು. ಅಂಥ ಸ್ಥಾಯೀ ಸಮಿತಿಯೊಂದನ್ನು ಏರ್ಪಡಿಸಬೇಕೆಂದು ಸಮ್ಮೇಲನದವರು ನಿರ್ಧರಿಸಿದ್ದು ಒಳ್ಳೆಯದಾಯಿತು.

× × ×

ಸ್ವಾತಂತ್ರ್ಯವೆಂದರೆ ಸ್ವರಾಜ್ಯವಲ್ಲ, ಶೋಷಣರಹಿತ ಸಮಾಜರಚನೆಯೇ ನಿಜವಾದ ಸ್ವರಾಜ್ಯ, ಅಂಥ ಸ್ವರಾಜ್ಯಸ್ಥಾಪನೆಯೆ ವಿಧಾಯಕ ಕಾರ್ಯಕ್ರಮದ ಗುಟ್ಟು ಎಂಬುದನ್ನು ಶ್ರೀ ಧೀರೇಂದ್ರ ಮುಜುಮುದಾರರು ಅಧ್ಯಕ್ಷಪದದಿಂದ ಬಹಳ ಮಾರ್ಮಿಕವಾಗಿ ಪ್ರತಿಪಾದಿಸಿದರು. ಸಮಾಜವು ಶೋಷಣರಹಿತವಾಗಬೇಕಾದರೆ ಈಗಿನ ರಚನೆ ಬದಲಾಗಿ ಆರ್ಥಿಕ ಹಾಗೂ ಸಾಮಾಜಿಕ ಕ್ರಾಂತಿ ನಡೆಯಲಿಕ್ಕೆ ಬೇಕು. ಆ ಕ್ರಾಂತಿಯನ್ನು ಅಹಿಂಸಾಮಾರ್ಗದಿಂದ ಕೈಗೂಡಿಸುವದೆ ಗಾಂಧೀಜಿಯವರ ಜೀವನಕರ್ತವ್ಯವಾಗಿತ್ತು. ಅದನ್ನು ಸಾಧಿಸುವದಕ್ಕಾಗಿಯೇ ಅವರು ವಿಧಾಯಕ ಕಾರ್ಯಕ್ರಮದ ಪ್ರಕ್ರಿಯೆಯನ್ನು ಶೋಧಿಸಿದರು.

× × ×

ಈ ಹೊತ್ತು ಕಮ್ಯುನಿಸ್ಟ ಪಕ್ಷದವರು ಹಿಂಸಾಚಾರದಿಂದ ಒಂದು ವರ್ಗವನ್ನು ನಿರ್ಮೂಲಗೊಳಿಸಿ, ಉತ್ಪಾದನಾದಿಗಳ ಕೇಂದ್ರೀಕರಣದಿಂದ ಶೋಷಣರಹಿತಸಮಾಜವನ್ನು ರಚಿಸಬೇಕೆಂದಿದ್ದಾರೆ. ಆದರೆ ಅವರ ಪ್ರಯತ್ನದ ಫಲವು ರಶಿಯಾದಲ್ಲಿ ಪ್ರತ್ಯಕ್ಷ ಕಾಣುತ್ತಿರುವದು. ಒಂದೇ ಪಕ್ಷದ ನಿರಂಕುಶ ಅಧಿಕಾರದ ತಾಂಡವ ನೃತ್ಯವು ಅಲ್ಲಿ ನಡೆದಿದೆ. ಸೊಶಾಲಿಸ್ಟ ಪಕ್ಷದವರೂ ಕೇಂದ್ರೀಕರಣದಿಂದಲೆ ಶೋಷಣರಹಿತ ಸಮಾಜವನ್ನು ನಿರ್ಮಿಸಬೇಕೆಂದಿದ್ದಾರೆ. ಆದರೆ ಜಗತ್ತಿನಲ್ಲಿ ಯಾವದೇ ಬಗೆಯ ಕೇಂದ್ರೀಕರಣವು- ಅದು ಅಧಿಕಾರದ್ದಿರಲಿ, ಆರ್ಥಿಕ ಶಕ್ತಿಯದಿರಲಿ, ಸಾಮಾಜಿಕ ಶಕ್ತಿಯದಿರಲಿ- ಯಾವಾಗಲೂ ಲೋಭ, ದರ್ಪ, ಗರ್ವ ಇವುಗಳನ್ನು ಹುಟ್ಟಿಸುವದು. ಆದುದರಿಂದಲೆ ಗಾಂಧೀಜಿಯವರು ವಿಕೇಂದ್ರೀಕರಣ, ರಾಜಕೀಯ–ಆರ್ಥಿಕ–ಸಾಮಾಜಿಕ ವಿಕೇಂದ್ರೀಕರಣವು ಅವಶ್ಯ ಎಂದು ಸಾರಿದರು.

× × ×

ಈ ರೀತಿ ಅಹಿಂಸೆ, ವಿಕೇಂದ್ರೀಕರಣ ಈ ಎರಡು ತಳಹದಿಗಳ ಮೇಲೆ ಗಾಂಧೀಜಿಯವರ ವಿಧಾಯಕ ಕಾರ್ಯಕ್ರಮವು ನಿಂತಿದೆ. ಆ ಬಗ್ಗೆ ಯಾರಲ್ಲಿ ಸ್ಫೂರ್ತಿ, ಉತ್ಸಾಹ, ಇವು ತುಂಬ ಇರುವವೊ ಅವರೇ ಸಂಘಟಿತರಾಗಿ ಶಿಸ್ತಿನಿಂದ ಕೆಲಸ ಮಾಡಿದರೆ ಈ ಸಂದರ್ಭದಲ್ಲಿ ಕೆಲಸವು ಆಗಬಲ್ಲದು. ಮಹಾತ್ಮಾಜಿಯವರ ನಿಧನದ ನಂತರ ಇದೊಂದು ಈಗ ಪರೀಕ್ಷಾಕಾಲವಿದೆ. ಈ ಪರೀಕ್ಷೆಯಲ್ಲಿ ನಾವು ಉತ್ತೀರ್ಣರಾದರೆ ಮಾತ್ರ ವಿಧಾಯಕ ಕಾರ್ಯಕ್ಕೆ ತೇಜವು ಬರಬಲ್ಲದು. ಇಲ್ಲದಿದ್ದರೆ ಕೇಂದ್ರೀಕರಣದ ಪ್ರವಾಹವು ನಮ್ಮನ್ನು ಕೊಚ್ಚಿಕೊಂಡು ಹೋಗುವದು.

### ೨ ಸಾಹಸ ಬೇಕು

ಲಾಹೋರದಲ್ಲಿ ಅಂದರೆ ಪಾಕಿಸ್ತಾನದಲ್ಲಿ ನಮ್ಮ ಹಲವು ಲೆಕ್ಕಪತ್ರಗಳು ಇನ್ನೂ ಆಗತಕ್ಕವಿವೆ ಅವುಗಳನ್ನು ಪೂರೈಸಲು ಇಲ್ಲಿಂದ ನಮ್ಮ ಲೆಕ್ಕಿಗರು (ಅಕೌಂಟಂಟ್ಸ) ಹೋಗಬೇಕಾಗಿವೆ. ಹಿಂದ ಸರಕಾರದವರು ಅವರಿಗೆ ಸಂಬಳ, ಮೇಲೆ ಸಂಬಳದ ಶೇಕಡಾ ೬೦ ರಷ್ಟು ಹೆಚ್ಚು, ಅಲ್ಲಿರುವಾಗ ಪೂರ್ಣ ಸೈನಿಕ ಸಂರಕ್ಷಣೆ ಕೊಡಲು ಒಪ್ಪಿದ್ದಾರೆ. ಆದರೆ ಸಾಕಷ್ಟು ಜನ ಹೋಗಲು ಸಿದ್ಧರಿಲ್ಲ ಎಂದು ಕೇಳಿದ್ದೇನೆ! ಇದು ಕೇವಲ ಒಂದು ಉದಾಹರಣೆ ಇಂಥ ಸಾಹಸಹೀನತೆಯ ಉದಾಹರಣೆಗಳು ಎಷ್ಟು ಇರುವವೊ ಹೇಳಲಾರೆ. ಆದರೆ ನಮ್ಮ ಜನರು ಹೀಗೆ ಸಾಹಸಹೀನರಾದರೆ ಮುಂದೆ ಗತಿಯೇನು? ಪಡೆದ ಸ್ವಾತಂತ್ರ್ಯವನ್ನು ನಾವು ರಕ್ಷಿಸಿಕೊಳ್ಳುವ ಬಗೆಯಾವುದು? ಈ ಹೊತ್ತು ಕಾಶ್ಮೀರ ದಾಳಿಗಾರರನ್ನು ಹೊಡೆದೋಡಿಸಲಿಕ್ಕೆ ನಮ್ಮ ಸೈನಿಕರು ಹೋಗದಿದ್ದರೆ ನಮ್ಮ ಗತಿ ಏನಾಗುವದು? ಸೈನಿಕರಿಗೆ ಮಾತ್ರ ಸಾಹಸ ಅವಶ್ಯ ಇತರರಿಗೆ ಬೇಡ, ಎಂದು ಯಾರಾದರೂ ತಿಳಿದಿದ್ದರೆ ಅದು ಸರ್ವಥಾ ತಪ್ಪು. ನಾವು ಈಗ ಒಂದು ಸ್ವತಂತ್ರ ರಾಷ್ಟ್ರವಾಗಿರುವೆವು. ಪ್ರತಿಯೊಂದು ರೀತಿಯಿಂದ ನಮ್ಮ ರಾಷ್ಟ್ರದ ರಕ್ಷಣೆ, ಪೋಷಣೆ, ಅಭಿವೃದ್ಧಿ ಇವುಗಳ ಸಂಪೂರ್ಣ ಹೊಣೆ ನಮ್ಮ ಮೇಲೆ, ಪ್ರತಿಯೊಬ್ಬ ನಾಗರಿಕನ ಮೇಲೆ ಇದೆ. ಅದನ್ನು ಅರಿತೇ ನಾವು ಪ್ರತಿ ಹೆಜ್ಜೆಯನ್ನು ಇಡಬೇಕು.

### ೩ ಕನ್ನಡಿಗರ ಗತಿಯೇನು ?

ನಾನು ಮೊನ್ನೆ ಪುಣೆಗೆ ಹೋದಾಗ ಒಬ್ಬ ಹಳೇ ಸ್ನೇಹಿತರು ನನ್ನನ್ನು ಒಂದು ಪ್ರಶ್ನೆ ಕೇಳಿದರು. 'ನಾಳೆ ಮಹಾರಾಷ್ಟ್ರ ಪ್ರಾಂತವಾದರೆ ನಾವು ಇಲ್ಲಿರುವ ೪೦-೫೦ ಸಾವಿರ ಕನ್ನಡಿಗರು ಏನು ಮಾಡಬೇಕು ? ' ಈ ಪ್ರಶ್ನೆ ಕೇಳಿ ನನಗೆ ಅತ್ಯಂತ ದುಃಖವಾಯಿತು. ಭಾಷಾನುಗುಣ ಪ್ರಾಂತರಚನೆಯೆಂದರೆ 'ಭಾಷಾ ಪಾಕಿಸ್ತಾನಗಳ' ನಿರ್ಮಾಣವೆಂದು ಈ ನನ್ನ ಮಿತ್ರರ ಭಾವನೆಯೊ ? ಆದರೆ ಈ ಪ್ರಶ್ನೆ ಅವರು ಕೇಳಿದರೆಂದ ಬಳಿಕ ಇಂಥ ವಿಚಾರಗಳು ಹಲವರಲ್ಲಿಯಾದರೂ ಇವೆ ಎಂಬುದು ಸ್ಪಷ್ಟವು. ಯಾವದೇ ಭಾಷಾನುಗುಣ ಪ್ರಾಂತವಾದರೂ ಎರಡನೆ ಭಾಷೆ ಮಾತಾಡುವವರು ಆ ಪ್ರಾಂತದಲ್ಲಿ ಇರಕೂಡದು ಎಂದು ಅರ್ಥವಲ್ಲ. ಇಷ್ಟೇ ಅಲ್ಲ. ಈಗ ಎಲ್ಲೆಲ್ಲಿ ಯಾರ್ಯಾರು ಇರುವರೊ ಅವರೂ ಸರಿದಾಡುವ ಕಾರಣವಿಲ್ಲ. ಅವರು ಎಲ್ಲರೂ ಹಿಂದ ಸಂಘರಾಜ್ಯದ(ಇಂಡಿಯನ್ ಯೂನಿಯನ್) ನಾಗರಿಕರು. ಯಾವದೇ ಪ್ರಾಂತದಲ್ಲಿ ಅವರು ಸಮಸಮಾನ ಹಕ್ಕುಬಾಧ್ಯತೆಯಿಂದ ಇರಬಲ್ಲರು. ಇಷ್ಟೇ ಅಲ್ಲ. ಅವರ ಸಂಖ್ಯೆ ಸಾಕಷ್ಟು ಇದ್ದರೆ ಅವರ ಭಾಷಾ ವಿಷಯಕ ಹಕ್ಕುಬಾಧ್ಯತೆಗಳು ಕಾಪಾಡಲಾಗುವವು. ಭಾಷೆಯೊಂದು ಬಿಟ್ಟು ಇತರ ಎಲ್ಲ ಆರ್ಥಿಕ, ಸಾಮಾಜಿಕ, ರಾಜಕೀಯ ಮುಂತಾದ ವಿಷಯಗಳಲ್ಲಿಯೂ ಅವರಿಗೂ ಇತರ ಭಾಷೆ ಮಾತಾಡುವವರಿಗೂ ಏನೂ ಭೇದವಿಲ್ಲ. ಅವರು ಆ ಪ್ರಾಂತಿಕ ಭಾಷೆಯನ್ನು ಚನ್ನಾಗಿ ಕಲಿತೇ ತೀರಬೇಕಾದೀತು. ಅದು ವ್ಯವಹಾರಿಕ ಅವಶ್ಯಕತೆ ಇರುವದು. ಆದುದರಿಂದ ಭಾಷಾನುಗುಣ ಪ್ರಾಂತ ರಚನೆ ಆದಾಕ್ಷಣಕ್ಕೆ ಆಯಾ ಪ್ರಾಂತದಲ್ಲಿ ಅನ್ಯ ಭಾಷೆ ಮಾತಾಡುವವರು ಯಾವದೇ ರೀತಿ ಗಾಬರಿಗೊಳ್ಳುವ ಕಾರಣವಿಲ್ಲ.

× × ×

ನಾಳೆ ಕರ್ನಾಟಕ ಪ್ರಾಂತವಾಯಿತೆಂದು ಭಾವಿಸುವ. ಇಲ್ಲಿ ಮರಾಠಿ, ತಮಿಳು, ತೆಲಗು, ಹಿಂದಿ, ಮಲಯಾಳಿ, ಇಂಗ್ಲೀಷ ಭಾಷೆಯನ್ನಾಡುವವರು ಇದ್ದೇ ತೀರುವರು. ಅವರು ಯಾವದೊಂದು ಸ್ಥಾನದಲ್ಲಿ ಸಾಕಷ್ಟು ಸಂಖ್ಯೆಯಲ್ಲಿದ್ದರೆ ಅವರ ಭಾಷಾ ರಕ್ಷಣೆಗಾಗಿ ಪ್ರಾಥಮಿಕ ಶಾಲೆ ಮುಂತಾದವುಗಳನ್ನು ಕಲ್ಪಿಸುವದು ನಮ್ಮ ಕರ್ತವ್ಯವಾಗುವುದು. ಅದೇ ಕಾಲಕ್ಕೆ ತಮ್ಮ ಭಾಷೆ ಕಲಿಯುವದಲ್ಲದೆ ಈ ಪ್ರಾಂತದ ಭಾಷೆಯಾದ ಕನ್ನಡವನ್ನೂ ಕಲಿಯುವದು ಅಪರಿಹಾರ್ಯವಿರುವದು. ಆದರೆ ಇತರ ಎಲ್ಲ ವಿಷಯಗಳಲ್ಲಿ ಜೀವನದ ಅನೇಕ ವಿಧದ ಚಟುವಟಿಕೆಗಳಲ್ಲಿ ಯಾವದೇ ಭೇದವು ಸ್ವಪರ ಭಾವವು ತಲೆದೋರಕೂಡದು. ಭಾಷೆಯೆಂಬದು ಧರ್ಮವಲ್ಲ ಅಥವಾ ಜಾತಿಯಲ್ಲ. ಅದೊಂದು ಕೇವಲ ವ್ಯವಹಾರದ ಸಾಧನವು. ಅದನ್ನು ನಾವು ಸಂದರ್ಭಾನುಸಾರವಾಗಿ ಒಂದೇ ಜೀವನದಲ್ಲಿ ಅನೇಕ ಸಾರೆ ಬದಲಾಯಿಸುತ್ತೇವೆ. ಮನುಷ್ಯನು ಏಕಕಾಲಕ್ಕೆ ಅನೇಕ ಧರ್ಮಗಳನ್ನು ಆಚರಿಸಲಾರನು ಅಥವಾ ಏಕಕಾಲಕ್ಕೆ ಅನೇಕ ಜಾತಿಯವನಿರಲಾರನು. ಆದರೆ ಭಾಷೆಯ ಮಾತು ಹಾಗಿಲ್ಲ. ಏಕಕಾಲಕ್ಕೆ ಅನೇಕ ಭಾಷೆಗಳನ್ನು ಕಲಿತವನಿರಬಲ್ಲನು. ಅವುಗಳನ್ನು ಉಪಯೋಗಿಸುವನು ಆ ದೃಷ್ಟಿಯಿಂದಲೆ ಈ ಭಾಷಾಸಮಸ್ಯೆಯ ಕಡೆಗೆ ನೋಡಬೇಕು.

× × ×

ಇನ್ನು ಕೊಂಕಣಿ, ಕೊಡಗ, ತುಳು, ಬಡಗು ಭಾಷೆಗಳು ಈ ಪ್ರಾಂತದಲ್ಲಿ ಬಾಯಿ ಭಾಷೆಗಳಿದ್ದರೂ ಅವುಗಳ ಮೇಲೆ ಯಾರ ಆಘಾತವೂ ಆಗದಂತೆ ನೋಡಿಕೊಳ್ಳುವುದು ಕರ್ನಾಟಕದ ಕರ್ತವ್ಯವಿರುವದು. ಯಾವದೇ ಪ್ರಾಂತದಲ್ಲಿ ಯಾವದೇ ಭಾಷೆಯವರಿಗೂ ಯಾವ ಭಯವೂ ಇರಕೂಡದು.

### ಘಟನಾ ಸಮಿತಿಯ ಅಧಿವೇಶನ
### ಅಧಿಕೃತ ಪ್ರಕಟನೆ

ಹಿಂದುಸ್ಥಾನ ಘಟನಾ ಸಮಿತಿಯ ಅಧಿವೇಶನವು ಅಕ್ಟೋಬರ ತಿಂಗಳ ಕೊನೆಯಲ್ಲಿ ಸೇರುವದೆಂದು ಘಟನಾ ಸಮಿತಿಯ ಕಛೇರಿಯಿಂದ ಅಧಿಕೃತ ಪ್ರಕಟನೆ ಹೊರಬಿದ್ದಿದೆ.

ಘಟನೆಯ ಕರಡನ್ನು ಒಪ್ಪಿಸಿ ಕೆಲವು ತಿಂಗಳುಗಳು ಕಳೆದಿದ್ದು ಈ ಅವಧಿಯಲ್ಲಿ ಭಾರತದ ಬಹುಸಂಖ್ಯಾಕ ಸಂಸ್ಥಾನಗಳಲ್ಲಿ ಮಹತ್ವದ ಸ್ಥಿತ್ಯಂತರಗಳಾಗಿವೆ. ಅದ್ದರಿಂದ ಘಟನೆಯ ಪರಿಶಿಷ್ಟದಲ್ಲಿ ಈ ಎಲ್ಲ ಸಂಸ್ಥಾನಗಳ ನಾಮನಿರ್ದೇಶ ಮಾಡಬೇಕಾಗುವದು. ಅಲ್ಲದೆ ಘಟನೆಯನ್ನು ಸ್ವೀಕರಿಸುವ ಕೊನೆಯ ಅಧಿವೇಶನದ ಕಾಲಕ್ಕೆ ಸಂಸ್ಥಾನಗಳ ಜನಸಂಖ್ಯೆಯ ಪ್ರಮಾಣಕ್ಕನುಸರಿಸಿ ಪ್ರಾತಿನಿಧ್ಯ ಕೊಡಬೇಕಾಗುವದು. ಈಗ ಸಂಸ್ಥಾನಗಳ ಪ್ರತಿನಿಧಿಗಳ ಸಂಖ್ಯೆಯನ್ನು ಲೀನೀಕರಣದಿಂದ ಒಕ್ಕೂಟದಲ್ಲಿ ಸೇರಿದ ಕಾರಣ ಪುನರ್ವಿಮರ್ಶೆ ಮಾಡಬೇಕಾಗಿದೆ. ಈ ಎಲ್ಲ ಕಾರಣಗಳ ಮೂಲಕ ಅಧಿವೇಶನವನ್ನು ಮುಂದೂಡುವದು ಅನಿವಾರ್ಯವಾಯಿತು ಎಂದು ಮೊದಲಾಗಿ ವಿವರಣೆ ಕೊಡಲಾಗಿದೆ. ಈ ವರ್ಷದ ಅಂತ್ಯದಲ್ಲಿಯೇ ಘಟನಾ ಸಮಿತಿಯು ಹೊಸ ಘಟನೆಯನ್ನು ಅಂಗೀಕರಿಸಬಹುದೆಂದು ನಿರೀಕ್ಷಿಸಲಾಗಿದೆ.

### ಕಾಂಗ್ರೆಸ ಕಾರ್ಯಕಾರೀ ಸಮಿತಿಯ ಸಭೆ

ಕಾಂಗ್ರೆಸ ಕಾರ್ಯಕಾರೀ ಸಮಿತಿಯ ಸಭೆಯು ತಾ ೧ ಕ್ಕೆ ಮುಂಜಾನೆ ಹೊಸದಿಲ್ಲಿಯಲ್ಲಿ ಡಾ. ರಾಜೇಂದ್ರಪ್ರಸಾದರ ಅಧ್ಯಕ್ಷತೆಯಲ್ಲಿ ಸೇರಿತ್ತು. ಅ. ಭಾ. ಕಾಂ. ಸಮಿತಿಯ ಸಭೆಯು ಡಿಸೆಂಬರದಲ್ಲಿ ಜಯಪೂರದಲ್ಲಿ ಸೇರಬೇಕೆಂದು ತೀರ್ಮಾನವಾಯಿತು. ಕಾಂಗ್ರೆಸ ಕಾರ್ಯಕಾರೀ ಮಂಡಲದ ಸದಸ್ಯರಿಗೆ ಪಂ. ಜವಾಹರಲಾಲ ನೆಹರೂ ಅವರು ಹೈದರಾಬಾದದ ಬಗ್ಗೆ ಮತ್ತು ಯುಕ್ತರಾಷ್ಟ್ರ ಸಂಘದವರು ನೇಮಿಸಿದ ಕಾಶ್ಮೀರ ಸಮಿತಿಯ ಬಗ್ಗೆ ಹಿಂದುಸ್ತಾನದ ಧೋರಣವೇನಿದೆ ಎಂಬುದನ್ನು ವಿವರಿಸಿದರೆಂದು ತಿಳಿಯುತ್ತದೆ. ಸರದಾರ ವಲ್ಲಭಭಾಯಿ ಪಟೇಲರ ಹೊರತಾಗಿ ಕಾರ್ಯಕಾರೀ ಸಮಿತಿಯ ಎಲ್ಲ ಸದಸ್ಯರೂ ಸಭೆಗೆ ಬಂದಿದ್ದರು. ಆಚಾರ್ಯ ವಿನೋಬಾಭಾವೆ ಮತ್ತು ಕೇಂದ್ರದಲ್ಲಿ ಕೂಲಿಕಾರ ಮಂತ್ರಿಗಳಾದ ಶ್ರೀ ಜಗಜೀವನರಾಮ ಇವರು ವಿಶೇಷ ಆಮಂತ್ರಣದ ಮೇರೆಗೆ ಸಭೆಗೆ ಆಗಮಿಸಿದ್ದರು.

### ಹಿಂದುಸ್ತಾನದ ಸುಗ್ರೀವಾಜ್ಞೆ
### ನಿಜಾಮರ ೧೦೦ ಕೋಟಿ ರೂ. ಗಳಿಗೆ ತಡೆ

ನಿಜಾಮರ ಹಾಗೂ ನಿಜಾಮ ಸರಕಾರದ ಹೆಸರಿನಲ್ಲಿರುವ ಸುಮಾರು ೯೦ ರಿಂದ ೧೦೦ ಕೋಟಿ ರೂಪಾಯಿ ಬೆಲೆಯ ಹಿಂದುಸ್ತಾನ ಸರಕಾರದ ಸಾಲ ಪತ್ರಗಳನ್ನು ವರ್ಗಾಯಿಸಕೂಡದೆಂದು ಹಿಂದುಸ್ತಾನ ಸರಕಾರದವರು ಇದೇ ತಾ ೧ ಕ್ಕೆ ರಾತ್ರಿ ಒಂದು ಸುಗ್ರೀವಾಜ್ಞೆ ಹೊರಡಿಸಿದರು.

ಈ ಆಜ್ಞೆಯ ಉದ್ದೇಶವು ಈ ಸಾಲ ಪತ್ರಗಳನ್ನು ವಶಪಡಿಸಿಕೊಳ್ಳುವದಿರದೆ ಅವನ್ನು ವರ್ಗಾಯಿಸಲು ಪ್ರತಿಬಂಧಿಸುವದೇ ಆಗಿದೆ. ನಿಜಾಮರಿಗೆ ಈ ಸಾಲ ಪತ್ರಗಳ ಮೇಲೆ ಬಡ್ಡಿ ಸಿಗುವದು. ಆದರೆ ಹಿಂದುಸ್ತಾನ ಸರಕಾರದ ಅಪ್ಪಣೆಯಿಲ್ಲದೆ ಅವುಗಳನ್ನು ಬೇರೆಯವರಿಗೆ ವರ್ಗಾಯಿಸಲುಬಾರದು. ನಿಜಾಮ ಸರಕಾರದವರು ಪಾಕಿಸ್ತಾನಕ್ಕೆ ಕೊಟ್ಟ ೨೦ ಕೋಟಿ ರೂ ಬೆಲೆಯ ಸಾಲಪತ್ರಗಳಿಗೂ ಈ ಸುಗ್ರೀವಾಜ್ಞೆ ಅನ್ವಯಿಸುವದು.

### ಮಹಾತ್ಮರ ಕೊಲೆಯ ಖಟ್ಲೆ

ಮಹಾತ್ಮಾ ಗಾಂಧಿಯವರ ಕೊಲೆ ಮತ್ತು ಕೊಲೆಯ ಒಳಸಂಚಿನ ವಿಚಾರಣೆಯು ಜೂನ ತಾ. ೨೮ ರಿಂದ ವಿಶೇಷ ನ್ಯಾಯಾಲಯದಲ್ಲಿ ಪುನಃ ಪ್ರಾರಂಭವಾಗಿದ್ದು ಸರಕಾರದ ಪರವಾಗಿ ಸಾಕ್ಷಿಗಳಾಗಹತ್ತಿವೆ.

● ಬ್ರಿಟಿಶರು ಕಲ್ಲಿದ್ದಲನ್ನು ಸಾಕಷ್ಟು ಕಳಿಸದಿದ್ದುದರಿಂದ ಪಶ್ಚಿಮ ಜರ್ಮನಿಗೆ ವಿದ್ಯುಚ್ಛಕ್ತಿಯನ್ನು ಪೂರೈಸುವವರಲ್ಲೊಂದೂ ಪೂರೈಕೆಯನ್ನು ನಿಲ್ಲಿಸಲು ಕೊಟ್ಟ ಆಜ್ಞೆಯನ್ನು ಪಾಲಿಸಲೊಲ್ಲದೆಂದುದಕ್ಕಾಗಿ ವಿದ್ಯುಚ್ಛಕ್ತಿ ಅಧಿಕಾರಿ ಹೆರ್ ಹಿಸ್ಸೆಲನಿಗೆ ಗುಂಡುಹಾಕಲಾಯಿತೆಂದೂ ರಶಿಯನ್ ಸುದ್ದಿ ಕೂಟ ತಿಳಿಸುತ್ತದೆ.

ಕರ್ಮವೀರ

ಶ್ರೀಮಚ್ಚಾಲುಕ್ಯ ವಿಕ್ರಮ ವರ್ಷ ೮೭೦
ಜೇಷ್ಠ ಬ॥ ೧೪ ಸೋಮವಾರ

# ಹೈದರಾಬಾದದ ಯುದ್ಧ ಸಿದ್ಧತೆ!

ಹಿಂದುಸ್ತಾನ—ಹೈದ್ರಾಬಾದ ಸರಕಾರಗಳಲ್ಲಿ ನಡೆದ ಒಡಂಬಡಿಕೆಯ ಮಾತುಕತೆಗಳು ಮುರಿದವೆಂದೂ ಆದರೂ ನಿಜಾಮ ಸರಕಾರದವರು ತಮ್ಮ ಧೋರಣದ ಪುನರ್ವಿಮರ್ಶೆ ಮಾಡಿ ತಿಕ್ಕಾಟವನ್ನು ತಪ್ಪಿಸಬೇಕೆಂದೂ ಕಳೆದ ವಾರ ಬರೆದಿದ್ದೆವು. ಆದರೆ ಈ ವಾರದಲ್ಲಿ ನಿಜಾಮ ಸಾಹೇಬರು ಒಡಂಬಡಿಕೆಯ ಮಾರ್ಗವನ್ನು ಉಪೇಕ್ಷಿಸಿ ಯುದ್ಧ ಸಿದ್ಧತೆಯ ಮಾರ್ಗವನ್ನವಲಂಬಿಸಿರುವರೆಂದು ಪ್ರಸಿದ್ಧವಾದ ಸುದ್ದಿಗಳಿಂದ ತಿಳಿದು ಬರುತ್ತದೆ. ಟೋರಿ ಪಕ್ಷದ ಪ್ರತ್ಯಕ್ಷ ಪ್ರೋತ್ಸಾಹದಿಂದ ಮತ್ತು ಪಾಕಿಸ್ತಾನ ಸರಕಾರದ ಪ್ರತ್ಯಕ್ಷಾಪ್ರತ್ಯಕ್ಷ ಸಹಾಯದಿಂದ ನಿಜಾಮ ಸಾಹೇಬರು ಪುಟಿದೆದ್ದವರಾಗಿ ಹಿಂದುಸ್ತಾನ ಸರಕಾರದ ಗೂಡ ಯುದ್ಧಕ್ಕೆ ಪಡ್ಡು ಹೊಡೆದು ನಿಂತಂತಾಗಿದೆ.

ನಿಜಾಮ ಸಾಹೇಬರಿಗೆ ಚರ್ಚಿಲ್ ಪ್ರಭೃತಿಗಳು ವಾಚಾ ಸಹಾಯ ಸಲ್ಲಿಸಿರುವಾಗ ಪಾಕಿಸ್ತಾನ ಸರಕಾರದವರು ಪ್ರತ್ಯಕ್ಷವಾಗಿ ಶಸ್ತ್ರಾಸ್ತ್ರಗಳ ಪೂರೈಕೆಯನ್ನು ಮಾಡುತ್ತಿರುವಾಗ ನಿಜಾಮರೇಕೆ ಯುದ್ಧಕ್ಕೆ ಸಿದ್ಧರಾಗಬಾರದು? ಕಳ್ಳತನದಿಂದ ನಿಜಾಮರು ಶಸ್ತ್ರಾಸ್ತ್ರಗಳನ್ನು ತರಿಸಿದ್ದಲ್ಲದೆ ವಿಮಾನ ದಾಳಿಯ ಮುಂಜಾಗ್ರತೆಗಾಗಿ ಸಂಸ್ಥೆಯೊಂದನ್ನು ಸಂಸ್ಥಾಪಿಸಲು ಎಲ್ಲ ಬಗೆಯ ಉಪಾಯಗಳನ್ನು ಕೈಕೊಂಡಿದ್ದಾರಂತೆ. ರಜಾಕಾರರ ಹಾವಳಿಯಂತೂ ಯಥಾಪ್ರಕಾರ ನಡೆದಿದೆ. ಇದೇ ತಾನೆ ಗಡಿ ಭಾಗಗಳಲ್ಲಿ ಸಂಚರಿಸಿಬಂದ ಭಾರತ ಸೇವಕ ಸಮಾಜದ ಪಂಡಿತ ಹೃದಯನಾಥ ಕುಂಜರು ಇವರು ವ್ಯಕ್ತಪಡಿಸಿದ ಅಭಿಪ್ರಾಯವನ್ನು ನೋಡಿದರೆ ಈ ಸಮಸ್ಯೆಯೆಷ್ಟೊಂದು ಜಟಿಲವಾಗಿದೆಂಬದು ಗೊತ್ತಾಗುವದು. ಕಾಲವಿಲಂಬದ ಧೋರಣೆಯು ಘಾತಕವಾಗಿದ್ದು ಸರಕಾರದವರು ಕೂಡಲೆ ಉಗ್ರ ಕ್ರಮ ಕೈಕೊಳ್ಳಬೇಕೆಂದು ಅವರು ಅಭಿಪ್ರಾಯ ಪಟ್ಟಿರುವರು.

ಹಿಂದುಸ್ತಾನ ಸರಕಾರ ಮೊದಲಿನಿಂದಲೂ ಹೈದರಾಬಾದದ ಬಗ್ಗೆ ಅತ್ಯಂತ ಸಮಂಜಸ ಧೋರಣವನ್ನು ಅನುಸರಿಸುತ್ತ ಬಂದಿದೆ. ನಮ್ಮ ನಮ್ಮಲ್ಲಿಯೆ ಯುದ್ಧವೆಸಗಿ ನಿರರ್ಥಕವಾಗಿ ಜನ ಧನ ಹಾನಿಯಾಗಬಾರದೆಂದು ಅವರು ಆದಷ್ಟು ಸಾಮೋಪಾಯಗಳಿಂದಲೆ ಈ ಪ್ರಶ್ನೆಯನ್ನು ಬಗೆಹರಿಸಲು ಹವಣಿಸುತ್ತಿದ್ದಾರೆ. ನಿಜಾಮ ಸಾಹೇಬರ ಈ ಮನೆಮುರುಕ ಧೋರಣವನ್ನು ಮೊನ್ನೆ ಮೊನ್ನೆಯವರೆಗೆ ಹಿಂದುಸ್ತಾನದ ಗವರ್ನರ ಜನರಲ್‌ರಾಗಿದ್ದ ಲಾರ್ಡ ಮೌಂಟಬ್ಯಾಟನ್‌ರು ಕೂಡ ತೆಗಳಿರುವರು. ಲಂಡನದಲ್ಲಿ ಏರ್ಪಡಿಸಲ್ಪಟ್ಟ ಸತ್ಕಾರ ಕೂಟವೊಂದರಲ್ಲಿ ಮಾತಾಡುತ್ತ ತಾವು ಮತ್ತು ನಿಜಾಮರ ಸಲಹೆಗಾರರಾದ ಸರ್ ವಾಲ್ಟರ ಮಾಂಕ್ಟನರು ಕೂಡಿ ಸಿದ್ಧಪಡಿಸಿದ ಯೋಜನೆಗಳಿಗೆ ನಿಜಾಮರು ಒಪ್ಪದಿದ್ದುದನ್ನು ನೋಡಿ ಇಬ್ಬರಿಗೂ ಎದೆಯೊಡೆದಂತಾಯಿತು ಎಂದು ಅವರು ಹೇಳಿ ಈ ಸಂಧಾನ ಭಂಗಕ್ಕೆ ನಿಜಾಮರೇ ಕಾರಣರಾಗಿರುವರೆಂದು ಅಭಿಪ್ರಾಯ ಪಟ್ಟಿರುವರು. ಹಿಂದುಸ್ತಾನದಲ್ಲಿಯ ಮುಸಲ್ಮಾನರಾದರೋ ಬಹುಸಂಖ್ಯಾಕರಾಗಿ ನಿಜಾಮರಿಗೆ ಹಿಂದುಸ್ತಾನ ಸರಕಾರದ ಗೂಡ ಒಡಂಬಡಿಕೆ ಮಾಡಿಕೊಳ್ಳಲು ಕೇಳಿಕೊಳ್ಳುತ್ತಲಿದ್ದಾರೆ.

ಹಿಂದುಸ್ತಾನದ ಉಪ ಮುಖ್ಯ ಮಂತ್ರಿಗಳಾದ ಸರದಾರ ವಲ್ಲಭಭಾಯಿ ಪಟೇಲರು ಬ್ರಿಟಿಶ್ ಟೋರಿ ಪಕ್ಷದ ಮತ್ತು ಅದರ ಅಧ್ವರ್ಯುಗಳಾದ ಚರ್ಚಿಲ್ಲರ ಉಪದ್ವ್ಯಾಪವನ್ನು ಸ್ಪಷ್ಟ ಶಬ್ದಗಳಿಂದ ಖಂಡಿಸಿ ಹೈದರಾಬಾದ ನಿಜಾಮ ಸಾಹೇಬರಿಗೆ ಹಿತೋಕ್ತಿಗಳನ್ನು ಹೇಳಿದ್ದಾರೆ. ಅಲ್ಪಸಂಖ್ಯಾಕರು ಮುಂಗೈ ಜೋರಿನಿಂದ ಆಡಳಿತ ಸಾಗಿಸುವ ಮಧ್ಯಯುಗದ ಅರಸೊತ್ತಿಗೆಯ ಕಲ್ಪನೆಯನ್ನು ನಿಜಾಮರು ಬಿಟ್ಟುಗೊಟ್ಟು ಪ್ರಜಾಪ್ರತಿನಿಧಿಗಳ ಇಚ್ಛೆಗನುಸರಿಸಿ ಪ್ರಜಾಪ್ರಭುತ್ವ ತತ್ವದಂತೆ ರಾಜ್ಯಭಾರ ಸಾಗಿಸಲು ಅವರು ಒಪ್ಪಿದರೆ ಹಾಗು ಹೈದರಾಬಾದ ಹಿಂದುಸ್ತಾನ ಸಂಬಂಧವನ್ನು ನಿರ್ಧರಿಸಬಲ್ಲ ಭೌಗೋಲಿಕ ಹಾಗು ಇತರ ಪರಿಸ್ಥಿತಿಗಳನ್ನು ಮನದಂದರೆ ಹೈದರಾಬಾದ ಸಮಸ್ಯೆಯು ಶಾಂತ ರೀತಿಯಲ್ಲಿ ಬಿಡುವದು ಎಂದು ಹೇಳಿ ನಿಜಾಮರ ಭವಿತವ್ಯವು ದುರಂತಮಯವಾದರೆ ಅದರ ಹೊಣೆಗಾರಿಕೆಯು ಹಿಂದುಸ್ತಾನದ ಮೇಲೆ ಇರದೆ ಬೇರೆಯವರ ಮೇಲೆಯೇ ಇರುವದು ಎಂದೂ ಎಚ್ಚರಿಕೆ ಕೊಟ್ಟಿರುವರು. ಆದರೆ ನಿಜಾಮ ಸಾಹೇಬರು ಈ ಎಚ್ಚರಿಕೆಗೆ ಕಿವಿಗೊಡುವಷ್ಟು ಸೌಜನ್ಯ ತಾಳುವರೋ ಎಂಬದು ಸಂಶಯಾಸ್ಪದವಾಗಿದೆ.



ಕಳೆದವಾರ ಮುಂಬಯಿಯಲ್ಲಿ ಭಾರತ ಸರಕಾರದ ಸಂಸ್ಥಾನ ಕಾರ್ಯದರ್ಶಿ ಶ್ರೀ. ವಿ. ಪಿ. ಮೆನೆನ್ನರು ಮುಂಬಯಿಯಲ್ಲಿ ಗುಜರಾಥ ನರೇಂದ್ರರನ್ನು ಭೆಟ್ಟಿಯಾದರು. ಮುಖ್ಯ ಮಂತ್ರಿ ಖೇರ, ಮುರಾರಜಿ ದೇಸಾಯಿ, ವಿ. ಪಿ. ಮೆನೆನ್ ಇವರನ್ನು ಎದುರಲ್ಲಿ ಕಾಣಬಹುದು. ಎಡಗಡೆ ಲುನಾವಾಡಾ ಮೊದಲಾದ ಸಂಸ್ಥಾನಗಳ ನರೇಂದ್ರರಿದ್ದಾರೆ.

# ವಾರದ ಸಿಂಹಾವಲೋಕನ

## ಅಗ್ಗದರದ ಅಂಗಡಿಗಳು

ಆಹಾರ ಧಾನ್ಯಗಳ ಧಾರಣೆ ಮಿತಿಮೀರಿ ಏರಿದ್ದನ್ನು ತಡೆಯುವುದಕ್ಕಾಗಿ ಮುಂಬಯಿ ಸರಕಾರದವರು ಪ್ರಾಂತದಲ್ಲಿ ಅಗ್ಗದರದ ಕಾಳಿನ ಅಂಗಡಿಗಳನ್ನು ತೆರೆದಿರುವರು. ಹದಿನೆಂಟು ನೂರು ರೂಪಾಯಿಗಳಿಗಿಂತ ಕಡಿಮೆ ಉತ್ಪನ್ನವಿದ್ದವರಿಗೆಲ್ಲ ಈ ಅಂಗಡಿಗಳ ಲಾಭ ದೊರೆವಂತೆ ಯೋಜಿಸಿದ್ದು ಸ್ತುತ್ಯವಾಗಿದೆ. ಈ ಯೋಜನೆಯಿಂದ ಸದ್ಯಕ್ಕೆ ಧಾರಣೆಗಳು ಇಳಿಮುಖವಾಗಿರದಿದ್ದರೂ ಆಗಬಹುದೆಂದು ಆಶಿಸಲಾಗಿದೆ. ಆದರೆ ಈ ಅಂಗಡಿಗಳ ಉಪಯೋಗವು ನಿಜವಾಗಿ ಅವಶ್ಯವಿದ್ದವರಿಗೆಲ್ಲ ಆಗಬೇಕಾದರೆ ಕೆಲವೊಂದು ಮಾರ್ಪಾಟುಗಳನ್ನು ಮಾಡಬೇಕಾದುದು ಅವಶ್ಯವೆನಿಸುತ್ತದೆ. ಅಲ್ಲದೆ ಆಯಾ ಜಿಲ್ಹೆಗಳಲ್ಲಿದ್ದ ನಿಯಮಗಳಲ್ಲಿನ ಭೇದವನ್ನೂ ತೆಗೆದುಹಾಕಬೇಕಾದುದು ಅವಶ್ಯವಾಗಿದೆ. ಜಮೀನದಾರರಿಗೆಲ್ಲ ಈ ಅಂಗಡಿಗಳ ಪ್ರಯೋಜನ ದೊರೆಯದೆಂದು ಹೇಳುವದು ನ್ಯಾಯ್ಯವಾಗಲಾರದು. ಜಮೀನದಾರರಾಗಿದ್ದು ಯಾರಲ್ಲಿ ಕಾಳಿನ ಸಂಗ್ರಹವಿದೆಯೊ ಅಂಥವರಿಗೆ ಈ ಸೌಕರ್ಯ ದೊರೆಯಲಾರದೆಂದು ವಿಧಿಸುವದು ಸೂಕ್ತವಾದುದು. ಅಲ್ಲದೆ ಆಯಾ ಜನರು ತಮಗೆ ಅನುಕೂಲವಾದ ಅಂಗಡಿಗಳಲ್ಲಿಯೆ ಕಾರ್ಡ ರಜಿಸ್ಟರ ಮಾಡಿಸುವಂತೆ ಅನುಕೂಲಿಸುವದು ಅವಶ್ಯ. ಕೇವಲ ಇರತಕ್ಕ ಮನೆಯ ವಾರ್ಡಿನ ಅಂಗಡಿಗಳಲ್ಲಿಯೆ ಕಾಳು ತೆಗೆದುಕೊಳ್ಳಬೇಕೆಂದು ಹೇಳುವದು ಅನೇಕ ಸಲ ಕಷ್ಟದ್ದಾಗುವದು. ಗೋವಿನಜೋಳದ ಬಗ್ಗೆ ಒತ್ತಾಯಪಡಿಸುವದು, ಅದನ್ನು ತೆಗೆದುಕೊಳ್ಳದಿದ್ದರೆ ಬೇರೆ ಧಾನ್ಯ ಕೊಡುವದೇ ಇಲ್ಲೆಂದು ವಿಧಿಸುವದು ನ್ಯಾಯ್ಯವಲ್ಲ. ಅದರಿಂದ ಜನತೆಗೆ ಅನುಕೂಲತೆಯನ್ನು ಒದಗಿಸಿಕೊಟ್ಟಂತಾಗುವುದಿಲ್ಲ. ಈ ಮೊದಲಾದ ಕೆಲವು ಸುಧಾರಣೆಗಳನ್ನು ಮಾಡಿದ್ದಾದರೆ ಜನತೆಗೆ ಈ ಕಷ್ಟಕಾಲದಲ್ಲಿ ನಿಜವಾದ ಸಹಾಯವನ್ನು ಸರಕಾರವು ಮಾಡಿದಂತಾಗುವದಲ್ಲದೆ ಪೇಟೆಗಳಲ್ಲಿಯ ಧಾರಣೆಗಳು ಇಳಿಯುವುದಕ್ಕೂ ಒಂದು ಬಗೆಯಿಂದ ಅನುಕೂಲ ಮಾಡಿಕೊಟ್ಟಂತಾಗುವದು.

## ಇನ್ನೂ ಸಾಮ್ರಾಜ್ಯದ ಮೋಹವೇ?

ಯುದ್ಧ ಕಾಲದಲ್ಲಿ ಬ್ರಿಟನ್ನದ ಮುಖ್ಯ ಮಂತ್ರಿಗಳಾಗಿದ್ದ ಚರ್ಚಿಲ್ಲರು ಕಾಮನ್ಸ ಸಭೆಯಲ್ಲಿ ಮಾತಾಡುವಾಗ ತಮ್ಮ ಸಾಮ್ರಾಜ್ಯತ್ವದ ಮೋಹವನ್ನು ಹೊರಗೆಡಹಿದರು. ಬ್ರಿಟನ್ನದ ಅರಸರು ಹಿಂದುಸ್ತಾನದ ಚಕ್ರವರ್ತಿ ಎಂಬ ಬಿರುದು ಬಿಟ್ಟುಗೊಟ್ಟದ್ದರಿಂದ ಚರ್ಚಿಲ್ಲರ ಹೊಟ್ಟೆಯಲ್ಲಿ ಕಸಿವಿಸಿಯಾಗಿದೆ. ಬ್ರಿಟಿಶ ಸಾಮ್ರಾಜ್ಯ ಮುಳುಗುತಿದೆಂದು ಅವರು ಕಣ್ಣೀರು ಸುರಿಸುತ್ತಿದ್ದಾರೆ. ಹಿಂದುಸ್ತಾನಕ್ಕೆ ಸ್ವಾತಂತ್ರ್ಯ ಸಿಕ್ಕದ್ದನ್ನು ಕಡುತರವಾಗಿ ಟೀಕಿಸಿ ಅಪಪ್ರಚಾರವನ್ನು ನಡೆಸಿದ್ದಾರೆ. ಹಿಂದುಸ್ತಾನದ ಕೂಡ ಸ್ನೇಹಸಂಬಂಧ ಬೆಳೆಸಿಕೊಳ್ಳಬೇಕೆಂಬ ಪ್ರಯತ್ನ ನಡೆದಾಗೆಲ್ಲ ಈ ಮಹಾನುಭಾವರು ಅಡ್ಡಗಾಲು ಹೊಡೆದದ್ದು ಸರ್ವಸ್ರುತವಿದೆ. ಬ್ರಿಟಿಶ ಮತದಾರರು ಅವರಿಗೆ ಮಂಗಳಾರತಿ ಮಾಡಿ ಮೂಲೆಗೆ ಕೂಡ್ರಿಸಿರದಿದ್ದರೆ ಹಿಂದುಸ್ತಾನವಿಂದು ಸ್ವತಂತ್ರವಾಗುತಿದ್ದಿತೋ ಇಲ್ಲವೋ ಸಂಶಯಾಸ್ಪದ. ಏಕೆಂದರೆ ಹಿಂದುಸ್ತಾನ ತಮ್ಮ ಕೈಯೊಳಗಿಂದ ಹೋದರೆ ತಮಗೆ ಸ್ವಚ್ಛಂದ ಮೇಯಲಿಕ್ಕೆ ಸ್ಥಳವೆಲ್ಲಿ ಸಿಕ್ಕಬೇಕೆಂದು ಅವರಿಗೆ ಯಾವಾಗಲೂ ವಿವಂಚನೆ. ಇಂಥ ಮಹಾನುಭಾವರು ಹಿಂದುಸ್ತಾನ ಸ್ವತಂತ್ರವಾದುದಕ್ಕಾಗಿ ಮನಬಂದಂತೆ ಕಿರಚಿಕೊಳ್ಳುವದು ಇಲ್ಲವೆ ಇಲ್ಲಿನ ಸಮಸ್ಯೆಗಳನ್ನು ಗುಡ್ಡದಷ್ಟು ಮಾಡಿಅಪಪ್ರಚಾರ ನಡೆಸುವದು ಆಶ್ಚರ್ಯಕರವೇನು ಅಲ್ಲ. ಹಿಂದುಸ್ತಾನದ ಉಪಮುಖ್ಯ ಮಂತ್ರಿಗಳಾದ ಸರದಾರ ವಲ್ಲಭಭಾಯರು ಈ ಅಪಪ್ರಚಾರದ ಬಗ್ಗೆ ಆಗಲೆ ಪ್ರಕಟನೆ ಹೊರಡಿಸಿ ಹಿಂದುಸ್ತಾನದ ಸ್ನೇಹ ಬೇಕಿದ್ದರೆ ಇದು ನಿಲ್ಲಬೇಕು ಎಂದು ಎಚ್ಚರಿಸಿದ್ದಾರೆ. ಚರ್ಚಿಲ್ಲರಾದರೂ ಇಂಥ ಉಪದ್ವ್ಯಾಪ ಮಾಡುವದನ್ನು ಬಿಟ್ಟುಗೊಟ್ಟರೆ ಬ್ರಿಟನ್ನಕ್ಕೂ ಹಿತ ಹಿಂದುಸ್ತಾನಕ್ಕೂ ಹಿತ.

## ಹಿಂದುಸ್ತಾನ-ಅಮೇರಿಕೆ ಒಪ್ಪಂದ

ಜಗತ್ತಿನಲ್ಲೆಲ್ಲ ವ್ಯಾಪಾರದ ಬಗ್ಗೆ ಆಯಾ ರಾಷ್ಟ್ರಗಳಲ್ಲಿ ಒಡಂಬಡಿಕೆಯಾಗಬೇಕೆಂದು ಜಿನೀವಾ—ಹವಾನಾಗಳಲ್ಲಿ ಪರಿಷತ್ತುಗಳು ಸೇರಿದ್ದವಷ್ಟೆ. ಈ ಪರಿಷತ್ತುಗಳ ಪರಿಣಾಮವಾಗಿ ಈಗ ಹಿಂದುಸ್ತಾನ ಅಮೇರಿಕೆಗಳಲ್ಲಿ ವ್ಯಾಪಾರ ಒಡಂಬಡಿಕೆಯಾಗಿದ್ದು ಬರುವ ೯ನೇ ತಾರೀಕಿನಿಂದ ಅದು ಜಾರಿಯಲ್ಲಿ ಬರುವದು. ಇದರಿಂದ ಅಮೇರಿಕೆಯು ಹಿಂದುಸ್ತಾನಕ್ಕೆ ಒಣಹಾಲು, ಒಣಗಿದ ಮೀನ ಮತ್ತು ಮಾಂಸ, ಕಚ್ಚಾ ತಂಬಾಕು, ಒಣಗಿದ ಹಣ್ಣು, ಕೆಲ ರಸಾಯನಗಳು, ಔಷಧಗಳು, ಕಚ್ಚಾ ತಾಮ್ರ, ಗ್ರೀಸ ಎಣ್ಣೆ, ಡಾಂಬರು, ಬಣ್ಣಗಳು ಕೆಲ ಯಂತ್ರ ಸಾಮಗ್ರಿಗಳು ರೇಡಿಯೋ, ಟ್ರ್ಯಾಕ್ಟರ, ಮೋಟರಗಳು ಮುಂತಾದ ಒಟ್ಟು ಸುಮಾರು ೧೮೪೯ ಸಾವಿರ ಡಾಲರುಗಳಷ್ಟು ಬೆಲೆ ಬಾಳುವ ಸಾಮಾನುಗಳನ್ನು ಕಳಿಸಬೇಕು. ಇದಕ್ಕೆ ಪ್ರತಿಯಾಗಿ ಹಿಂದುಸ್ತಾನವು ಅಮೇರಿಕೆಗೆ ಸುಮಾರು ೫೫೧೪೫ ಸಾವಿರ ರೂಪಾಯಿಗಳ ಸಣಬು ಮತ್ತು ಇನ್ನಿತರ ಕೆಲವು ಕಚ್ಚಾ ಮಾಲುಗಳನ್ನು ಕಳಿಸಬೇಕು. ಈ ಪರಿಷತ್ತುಗಳಿಗೆ ಹೋಗಿದ್ದ ಹಿಂದುಸ್ತಾನದ ಶಿಷ್ಟಮಂಡಳದ ಸದಸ್ಯರಲ್ಲಿ ಒಬ್ಬರಾದ ಶ್ರೀ ದ. ಪ. ಕರಮರಕರರು ಹುಬ್ಬಳ್ಳಿಯಲ್ಲಿ ಪತ್ರಿಕಾ ಪರಿಷತ್ತಿನಲ್ಲಿ ಫಲಶ್ರುತಿಯನ್ನು ವಿವರಿಸಿದರು. ಹಿಂದುಸ್ತಾನ ಕೇವಲ ಕಚ್ಚಾಮಾಲು ಪರದೇಶಗಳಿಗೆ ಕಳಿಸುವದರಿಂದ ಅಷ್ಟೊಂದು ಲಾಭವಿಲ್ಲ. ಉದ್ಯೋಗಗಳನ್ನು ಅಭಿವೃದ್ಧಿಪಡಿಸಿಕೊಂಡು ಪಕ್ಕಾ ಮಾಲು ಕಳಿಸಹತ್ತಿದರೆ ಹೆಚ್ಚು ಪ್ರಯೋಜನವಿದೆಯೆಂದು ಹೇಳಿದರು. ಪರರಾಷ್ಟ್ರಗಳಲ್ಲಿ ಹಿಂದುಸ್ತಾನದ ಘನತೆ ಗೌರವಗಳು ಇದೀಗ ಹೆಚ್ಚುತಿದ್ದು ವಿದೇಶೀಯರು ಅದರ ಉಜ್ವಲ ಭವಿಷ್ಯತ್ತಿನ ಕಡೆಗೆ ದೃಷ್ಟಿಯಿಟ್ಟು ಸ್ನೇಹ ಸಂಬಂಧ ಬೆಳೆಸುತಿರುವರೆಂದೂ ಶ್ರೀ ಕರಮರಕರರು ಹೇಳಿದರು. ಹಿಂದುಸ್ತಾನದ ಉದ್ದಿಮೆದಾರರು ಬರಿ ಕಚ್ಚಾಮಾಲು ಪೂರೈಸುವ ದಲ್ಲಾಳರಾಗದೆ ಪಕ್ಕಾ ಮಾಲುಗಳನ್ನು ಪರದೇಶಗಳಿಗೆ ಕಳಿಸಿ ರಾಷ್ಟ್ರದ ಸಂಪತ್ತನ್ನು ಹೆಚ್ಚಿಸಬೇಕು.

## ನಮ್ಮ ರಾಷ್ಟ್ರಗೀತೆ

ವಂದೇ ಮಾತರಂ ರಾಷ್ಟ್ರಗೀತವನ್ನು ಬದಲಿಸಿ ಅದರ ಸ್ಥಳದಲ್ಲಿ ಕವಿವರ್ಯ ರವೀಂದ್ರನಾಥ ಟಾಗೋರರ ಜನಗಣಮನ ಅಧಿನಾಯಕ ಎಂಬಗೀತವನ್ನು ರಾಷ್ಟ್ರಗೀತವನ್ನಾಗಿ ಮಾಡಬೇಕೆಂದು ಹಿಂದುಸ್ತಾನ ಸರಕಾರದವರು ತಾತ್ಪೂರ್ತಿಕವಾಗಿ ನಿರ್ಧರಿಸಿದ್ದಾರೆ. ಈ ನಿರ್ಧಾರಕ್ಕನುಸಾರವಾಗಿ ನಮ್ಮ ಮುಂಬಯಿ ಸರಕಾರದವರು ಈ ಗೀತವನ್ನು ಪ್ರಾಂತದಲ್ಲೆಲ್ಲ ರಾಷ್ಟ್ರಗೀತವೆಂದು ಸಾರಿದ್ದಾರೆ. ನಮ್ಮ ವಿದ್ಯಾಲಯ ಮೊದಲಾದವುಗಳಲ್ಲಿ ಇನ್ನು ಮುಂದೆ ವಂದೇ ಮಾತರಂದ ಬದಲು ಜನಗಣಮನ ಅಧಿನಾಯಕಜಯಹೇಪದ್ಯವು ಹಾಡಲ್ಪಡತಕ್ಕದ್ದು. ಸರಕಾರದ ಈ ನಿರ್ಣಯವನ್ನು ಕೇಳಿ ಯಾರಿಗಾದರೂ ದುಃಖವಾಗದಿರದು. ವಂದೇ ಮಾತರಂ ಗೀತವು ವಂಗಭಂಗ ಚಳವಳಿಯ ಕಾಲದಿಂದಲೂ ನಮ್ಮ ರಾಷ್ಟ್ರಗೀತವಾಗಿದೆ. ಹಿಂದುಸ್ತಾನ ಸ್ವಾತಂತ್ರ್ಯಕ್ಕಾಗಿ ಹೂಡಿದ ಎಲ್ಲ ಹೋರಾಟಗಳಲ್ಲಿಯೂ ಅದೇ ನಮ್ಮ ರಾಷ್ಟ್ರಗೀತವಾಗಿತ್ತು. ಆ ಗೀತಕ್ಕಾಗಿಯೇ ಸಾವಿರಾರು ಭಾರತೀಯರು ಸೆರೆಮನೆ ಕಂಡದ್ದುಂಟು. ಹಿಂದುಸ್ತಾನದ ಹಳ್ಳಿಹಳ್ಳಿಗಳಲ್ಲಿಯೂ ಈ ಪದವು ಅತ್ಯಂತ ಪ್ರಚಾರದಲ್ಲಿದೆ. ಹಳ್ಳಿಯ ಬಾಲಬಾಲಿಕೆಯರ ಬಾಯಲ್ಲಿ ವಂದೇ ಮಾತರಂ ಗೀತ ಇದೆ, ಇಂಥ ಲೋಕಪ್ರಿಯ ಮತ್ತು ಭಾರತೀಯರಲ್ಲೆಲ್ಲ ಹುರುಪು ಉತ್ಸಾಹಗಳನ್ನು ಸ್ಫುರಿಸಲು ಸಮರ್ಥವಾಗಿದ್ದ ವಂದೇಮಾತರಂ ಗೀತವನ್ನು ಬಿಟ್ಟುಗೊಟ್ಟದ್ದು ಅತ್ಯಂತ ದುರ್ದೈವದ ಸಂಗತಿಯು. ಸೈನಿಕ ಕೂಚಕ್ಕೆ ಯೋಗ್ಯವಾದ ಗೀತ ವಂದೇಮಾತರಂ ಗೀತವಲ್ಲ ಎಂಬ ನೆವದಿಂದಹಿಂದುಸ್ತಾನ ಸರಕಾರದವರು ಅದನ್ನು ಬದಲಿಸಿದ್ದು ವಿಷಾದಕರವಾದುದು. ಮುಸ್ಲಿಂ ಲೀಗಿನವರು ಎಂದಿನಿಂದಲೂ ವಂದೇ ಮಾತರಂ ಗೀತವನ್ನು ವಿರೋಧಿಸುತಿದ್ದರು. ನಿಜವಾಗಿ ವಿಚಾರ ಮಾಡಿದರೆ ಈಗ ಪ್ರಚಾರದಲ್ಲಿರುವ ವಂದೇ ಮಾತರಂ ಗೀತಕ್ಕೆಮುಸಲ್ಮಾನರಆಕ್ಷೇಪವಿರಲು ಏನೂ ಕಾರಣವಿಲ್ಲ. ಮುಸ್ಲಿಂ ಲೀಗಿನವರು ಬೇಡಿದಂತೆ ಸ್ವತಂತ್ರರಾಷ್ಟ್ರವನ್ನು ಪಡೆದರೂ ಮುಸಲ್ಮಾನರನ್ನು ಸಂತೋಷಪಡಿಸುವುದಕ್ಕಾಗಿವಂದೇ ಮಾತರಂಕ್ಕೆಹಿಂದುಸ್ತಾನಸರಕಾರದವರು ಕತ್ತರಿ ಹಾಕಿದ್ದು ನ್ಯಾಯ್ಯವಾಗಲಿಲ್ಲ. ಜನಗಣಮನ ಹಾಡಿನಲ್ಲಿ ಸಿಂಧ ಪಂಜಾಬಗಳನ್ನು ಭಾರತದಲ್ಲಿ ಸೇರಿಸಿದ್ದಾಗಿದೆ. ಸ್ವಾಭಾವಿಕವಾಗಿಯೆ ಪಾಕಿಸ್ತಾನ ಸರಕಾರದವರು ಅದಕ್ಕೆ ಆಕ್ಷೇಪಿಸಬಹುದು. ಇದಕ್ಕಾಗಿ ಸರಕಾರದವರು ಮತ್ತಾವ ಉಪಾಯ ಯೋಜಿಸುವರೋ ನೋಡಬೇಕು? ಹೀಗೆ ಎಂದಿನಿಂದಲೂ ಪ್ರಚಾರದಲ್ಲಿದ್ದ ವಂದೇ ಮಾತರಂ ಪದ್ಯವನ್ನು ಬಿಟ್ಟುಗೊಡುವದಕ್ಕೆ ಅಷ್ಟೇನು ಪ್ರಬಲ ಕಾರಣಗಳಿರಲಿಲ್ಲೆಂಬುದು ನಿರ್ವಿವಾದವಾಗಿದೆ.

# ಅಧಿಕಾರದಲ್ಲಿರುವ ಕಾಂಗ್ರೆಸ್ಸು ಮತ್ತು ಹೊರಗಿರುವ ಕಾಂಗ್ರೆಸ್ಸು

ಸರಕಾರದ ಅಧಿಕಾರ ಸ್ಥಾನಗಳಲ್ಲಿರುವ ಮತ್ತು ಅದರ ಹೊರಗಿರುವ ಕಾಂಗ್ರೆಸ್ಸಿಗರೊಳಗಿನ ಸಂಬಂಧ ಅಷ್ಟು ಸೌಹಾರ್ದಪೂರ್ಣವಾಗಿಲ್ಲೆಂದು ನಾನು ಎಲ್ಲೆಡೆಗಳಲ್ಲಿಯೂ ಕಾಣುತ್ತಿದ್ದೇನೆ. ಕಾಂಗ್ರೆಸ್ ಸಮಿತಿಗಳಲ್ಲಿ ಅಧಿಕಾರ ಸ್ಥಾನಗಳನ್ನು ಹಿಡಿದವರಿಗೂ ಹೊರಗಿರುವವರಿಗೂ ಇರುವ ಸಂಬಂಧದ ಮಾತೂ ಹಾಗೆಯೆ ಇದೆ. ಇವರಲ್ಲಿ ಪ್ರತಿಯೊಂದು ವರ್ಗದವರೂ ಉಳಿದೆರಡನ್ನು ನೋಡಿ ಕರಬುತ್ತಾರೆ. ಅಲ್ಲದೆ ಇವೆರಡರಿಂದ ಹೊರಗೆ ನಿಂತಿರುವ ಇನ್ನೆರಡು ಕಾಂಗ್ರೆಸ್ ವರ್ಗಗಳೂ ಇವೆ. ಅವುಗಳಲ್ಲಿ ತಮ್ಮ ತಾರುಣ್ಯದಲ್ಲಿ ಸ್ವಾತಂತ್ರ್ಯಕ್ಕಾಗಿಯೂ ನ್ಯಾಯನೀತಿ, ಶುದ್ಧಾಚಾರಗಳುಳ್ಳ ಆಡಳಿತದ ಸ್ಥಾಪನೆಗಾಗಿಯೂ ಶ್ರದ್ಧೆಯಿಂದಲೂ ವಿಧೇಯತೆಯಿಂದಲೂ ಕಾಂಗ್ರೆಸ್ಸಿನ ಸೇವೆ ಮಾಡಿದ ವರ್ಗವೊಂದು. ಸ್ವಾತಂತ್ರ್ಯ ಪ್ರಾಪ್ತಿಯಿಂದ ಅವರಿಗೆ ಸಂತೋಷ ಸಮಾಧಾನಗಳಾಗುವ ಬದಲು ಅವರಲ್ಲಿ ವ್ಯಥೆಯೂ ಅಸಂತೋಷವೂ ಉಂಟಾಗಿದೆ. ಯಾವ ಕಾಂಗ್ರೆಸ್ಸನ್ನು ಕಟ್ಟಿ ಬಲಗೊಳಿಸಲು ತಾವು ನೆರವಾದೆವೊ ಅದು ಅಧಿಕಾರವನ್ನು ಪಡೆದ ಮೇಲೆ ಜನರ ಕೈಬಿಟ್ಟಿತು; ಅಂತರಿಕ ನೀತಿಗೇಡಿತನದಿಂದ ಮೊದಲು ಸಾಧುತಿದ್ದ ಉದಾತ್ತ ಧ್ಯೇಯಗಳನ್ನು ಕೈಗೂಡಿಸಿಕೊಳ್ಳಲು ಅದು ಅಸಮರ್ಥವಾಗಿದೆ— ಎಂಬದಾಗಿ ಅವರು ವ್ಯಸನಪಡುತ್ತಾರೆ. ಕಾಂಗ್ರೆಸ್ ಸಂಸ್ಥೆಯಿಂದು ಸ್ವಾರ್ಥಸಾಧನೆಗೂ ಪ್ರಬಲ ರಾಜಕೀಯ ಗುಂಪುಗಳ ಶಕ್ತಿಸಂಘಟನೆಗೂ ಅನುಕೂಲವಾದ ಸಾಧನವಾಗಿಬಿಟ್ಟದೆಯೆಂದು ಅವರು ನೊಂದುಕೊಂಡಿದ್ದಾರೆ. ಸ್ವತಃ ಅವರು ಸಕ್ರಿಯ ಕಾರ್ಯರಂಗದಿಂದ ಎಂದೋ ದೂರವಾಗಿದ್ದರೂ ಎಲ್ಲೆಡೆಗಳಲ್ಲಿ ದುಷ್ಟಪದ್ಧತಿಗಳು ತಾವೇ ತಾವಾಗಿರುವದನ್ನು ನೋಡುವಾಗ ಅವರಿಗೆ ಮನಶ್ಶಾಂತಿ ಉಳಿಯದಾಗಿದೆ. ಇನ್ನೊಂದು ವರ್ಗವೆಂದರೆ ಸಾಮಾನ್ಯ ನಾಗರಿಕರು. ಅವರಿಗೆ ಈ ಪಕ್ಷಪಂಗಡಗಳಲ್ಲಿ ಆಸಕ್ತಿಯಿಲ್ಲ. ಅವರು ಅಪೇಕ್ಷಿಸುವದಿಷ್ಟೇ— ಒಳ್ಳೆ ಸರಕಾರ ಬೇಕು, ಸಭ್ಯವರ್ತನೆ ಬೇಕು, ಜನರ ಅರ್ಜಿಗಳಿಗೆ ಬೇಗ ಬೇಗನೆ ಅಧಿಕಾರಿಗಳ ಗಮನ ದೊರೆಯಬೇಕು, ಲಂಚಗುಳಿತನವಿಲ್ಲದ ಆಡಳಿತ ಬೇಕು ಮತ್ತು ಅದು ಜನರ ಸೌಕರ್ಯವನ್ನು ಹೆಚ್ಚಿಸುವಂತೆ ಸಂಘಟಿತವಾಗಿರಬೇಕು. ಅವರಿಗೆ ಈ ವಿಷಯಗಳಲ್ಲಿ ಸುಧಾರಣೆಯಾದುದೇನೂ ಕಾಣುವದೇ ಇಲ್ಲ, ಬದಲಿಗೆ ಅವು ದಿನ ಹೋದಂತೆ ಕೆಡುತಿರುವಂತೆ ಅವರಿಗನಿಸುತಿದೆ. ಎಷ್ಟು ಹಣಕೊಟ್ಟರೂ ಬಲೆಗೆ ಬೀಳದವರೂ ಕೆಲವರಿರುವರು. ಆದರೆ ವರ್ಚಸ್ಸುಳ್ಳವರ ದಾಕ್ಷಿಣ್ಯಕ್ಕೆ ಕಟ್ಟು ಬೀಳದವರು ಇನ್ನಷ್ಟು ವಿರಳ. ಈ ಕುಂದು ಕೊರತೆಗಳಿಗೆ ಸರಕಾರದ ಪ್ರಮುಖರು ಅನೇಕ ಸಮಾಧಾನಗಳನ್ನು ಕೊಡಬಲ್ಲರೆಂಬದು ನಿಜ. ಆದರೆ ಅಸಮಾಧಾನ ಹೊಂದಿದ ಜನರಿಗೆ ಇದರಿಂದ ಸಮಾಧಾನ ಮಾತ್ರ ಆಗುವದಿಲ್ಲ. ಪರಿಣಾಮವಾಗಿ, ಕಾಂಗ್ರೆಸ್ಸಿನ ಹೆಸರು ಜನರಲ್ಲಿ ದಿನಹೋದಂತೆ ಅಪ್ರಿಯವಾಗುತ್ತ ಸಾಗಿದೆ.

ಪರಿಸ್ಥಿತಿ ಹೆಚ್ಚುಕಡಿಮೆ ಹೀಗೆಯೆ ಇದೆಯೆಂದು ಎಲ್ಲರೂ ಒಪ್ಪುವರೆಂದು ನನ್ನೆಣಿಕೆ. ಈ ವಿಷಾದಕರ ಅವಸ್ಥೆಗೆ ಕಾರಣವೇನು, ಅದಕ್ಕೆ ಉಪಾಯಗಳೇನು ಎಂದು ಕಂಡುಹಿಡಿಯಲು ಈ ಸಮಾಚಾರವನ್ನು ಇಲ್ಲಿ ಉಲ್ಲೇಖಿಸಿದ್ದೇನೆ, ಇಷ್ಟೆ.

ಅಧಿಕಾರದಲ್ಲಿರುವ ಕಾಂಗ್ರೆಸಿಗರಿಗೂ ಸಮಿತಿಗಳಲ್ಲಿರುವವರಿಗೂ ಇರುವ ಮತ್ಸರದ ಮುಖ್ಯ ಕಾರಣಗಳು ಹೀಗಿವೆ :

ಅಧಿಕಾರ ಪದವಿಯನ್ನು ಪಡೆದವನಿಗೆ ಅದು ಭಾರವೆನಿಸುವದರ ಬದಲು ಲಾಭದ ಸಾಧನವಾಗಿದೆ–ಲಾಭವೆಂದರೆ ಧನಲಾಭ ಗೌರವಲಾಭ, ಎರಡೂ ಬಂತು. ಸರಕಾರಿ ಸಂಸ್ಥೆಗಳಲ್ಲಾಗಲಿ ಸರಕಾರನಿಯುಕ್ತ ಸಮಿತಿಗಳಲ್ಲಾಗಲಿ ದೊರಕುವ ಪ್ರತಿಯೊಂದು ಪದವಿಯ ಸಂಗಡವೂ ಭತ್ತೆ, ಸಂಬಳ, ಬೇರೆಯವರಿಗೆ ಉಪಕಾರ ಮಾಡುವ ಅಧಿಕಾರ, ನೇಮಕ ಮಾಡುವ ಅಧಿಕಾರ ಮತ್ತು ಆ ಸ್ಥಾನದಲ್ಲಿ ತಾನಿಲ್ಲದಿದ್ದರೆ ಮಾಡಿಸಿಕೊಳ್ಳಲು ಅಸಾಧ್ಯವಾಗಿದ್ದ ಕೆಲಸಗಳನ್ನು ಮಾಡಿಸಿಕೊಳ್ಳುವ ಸಂದರ್ಭ, ಇವುಗಳು ಬರುತ್ತವೆ. ಅವನು ಮಾಡಬೇಕಾದ ಕರ್ತವ್ಯಗಳು ಲಾಭಗಳೊಡನೆ ಹೋಲಿಸಿದರೆ ಹಗುರಾಗಿಯೆ ಇರುವವು; ಅದರಲ್ಲಿಯೂ ವಿಚಿತ್ರವೆಂದರೆ, ವಿಶೇಷವೂ ಗಂಭೀರವೂ ಆದ ಹೊಣೆಗಳುಳ್ಳ ನೇಮಕಗಳನ್ನು ಮಾಡುವಾಗ, ಕಾಂಗ್ರೆಸ್ ಸರಕಾರಗಳಲ್ಲಿ ಕೂಡ, ಬಾಯಲ್ಲಿ ಹೇಳುವ ಧ್ಯೇಯ ತದ್ವಿರುದ್ಧವಾಗಿದ್ದರೂ [ನಿಜವಾಗಿ ಜಾತೀಯ ಪ್ರಾತಿನಿಧ್ಯದ ತತ್ವವನ್ನೆ' ಅನುಸರಿಸಲಾಗುತ್ತಿದೆ. ಈ ಪ್ರಕಾರ, ಹುರಿಯಾಳುಗಳಿಗೆ ಅಧಿಕಾರ ಪತ್ರ ಕೊಡುವಾಗ, ಮಂತ್ರಿಗಳನ್ನು ನೇಮಿಸುವಾಗ, ಸಣ್ಣ ಪುಟ್ಟ ತಾತ್ಕಾಲಿಕ ಸಮಿತಿಗಳನ್ನು ನೇಮಿಸುವಾಗ ಕೂಡ ಪ್ರತಿಯೊಬ್ಬನೂ ಈ ಜಾತಿಯ ಇಲ್ಲವೆ ಆ ಜಾತಿಯ, ಅಥವಾ ಈ ಪ್ರದೇಶದ ಇಲ್ಲವೆ ಆ ಪ್ರದೇಶದ ವ್ಯಕ್ತಿಯೆಂಬ ದೃಷ್ಟಿಯಿಂದ ವಿಚಾರಿಸುವನೇ ಹೊರತು ಆ ವ್ಯಕ್ತಿಯ ಯೋಗ್ಯತೆ ಸಾಮರ್ಥ್ಯಗಳನ್ನು ಗಮನಿಸುವದಿಲ್ಲ. ಹೀಗೇಕೆಂದರೆ, ಪಕ್ಷದ ಬಲ ಬೆಳಸಲು ಇದು ಅವಶ್ಯವಾದದರಿಂದ ಮತ್ತು ಪ್ರತಿಯೊಂದು ಸ್ಥಾನವೂ ಒಂದು "ನೌಕರಿ"ಯೆನಿಸಿದ್ದರಿಂದ ಪರಿಣಾಮವಾಗಿ, ಯಾವುದಾದರೊಂದು ಅಧಿಕಾರ ಸ್ಥಾನವನ್ನು ಪಡೆಯುವ ಹಂಬಲವಿಲ್ಲದವರ ಸಂಖ್ಯೆ ಬಹಳ ಅಲ್ಪವಾಗಿದೆ. ಅಧಿಕಾರ [ಸ್ಥಾನ, ·ನೌಕರಿಗಳ ಸಂಖ್ಯೆ ದಿನದಿನವೂ ಬೆಳೆಯುತಿದ್ದರೂ ಅಭಿಲಾಷಿಗಳ ಸಂಖ್ಯೆಗಿಂತ ಸ್ಥಾನಗಳ ಸಂಖ್ಯೆ ಎಷ್ಟೊ ಕಡಿಮೆಯಾಗಿರುವದರಿಂದ ಸ್ಥಾನ ದೊರಕದೆ ಹೊರಗುಳಿದವರು ಅಸಂತುಷ್ಟರಾಗುವರು. ಅಧಿಕಾರ ಸ್ಥಾನಗಳನ್ನು ಸಂಪಾದಿಸುವದರಲ್ಲಿ ನಿರಾಶರಾದವರು ಕಾಂಗ್ರೆಸ್ ಸಮಿತಿಗಳ ಕಾರ್ಯನಿರ್ವಾಹಕ ಮಂಡಲಗಳಲ್ಲಿ ಸೇರಿಕೊಂಡು ಕಾಂಗ್ರೆಸ್ ಸರಕಾರಗಳಿಗೆ ಪ್ರತಿಸ್ಪರ್ಧಿಗಳಾಗಿ ಕೆಲಸ ಮಾಡುವರು. ಹೀಗೆ ಒಂದು ಬಗೆಯ ದ್ವಿದಲ ರಾಜ್ಯಪದ್ಧತಿ ಅಸ್ತಿತ್ವಕ್ಕೆ ಬಂದಿದೆ. ಸಮಿತಿಗಳಲ್ಲಿರುವ ಕಾಂಗ್ರೆಸ್ಸು ಸರಕಾರದಲ್ಲಿರುವ ಕಾಂಗ್ರೆಸ್ಸನ್ನು ಆಳಲು ಯತ್ನಿಸಿದರೆ ಸರಕಾರದಲ್ಲಿರುವ ಕಾಂಗ್ರೆಸ್ಸು ಇನ್ನೊಂದರ ವಿರುದ್ಧ ತನ್ನ ಸ್ಥಾನವನ್ನು ಕಾಯ್ದುಕೊಳ್ಳಲು ಹೆಣಗುವದು.

ಇಂತು, ಕಾಂಗ್ರೆಸ್ ಸಮಿತಿಗಳೂ ಅಧಿಕಾರ ಪದವಿಗಳೇ. ಆದುದರಿಂದ ರಾಜಕೀಯ ಅಧಿಕಾರದ ಅಭಿಲಾಷೆಯಿರುವವರೆಲ್ಲರೂ ಈ ಸಮಿತಿಗಳಲ್ಲಿ ಹೊಕ್ಕಿಕೊಳ್ಳಬಯಸುತ್ತಾರೆ. ಅಲ್ಲಿಯೂ ಸ್ಥಾನಗಳಿಗಿಂತ ಸ್ಥಾನಾಭಿಲಾಷಿಗಳೇ ಎಷ್ಟೋ ಹೆಚ್ಚಾಗಿರುವದರಿಂದ ಕಾಂಗ್ರೆಸ್ಸಿನೊಳಗೇ ಬೇರೆ ಬೇರೆ ಗುಂಪುಗಳು ಅಸ್ತಿತ್ವಕ್ಕೆ ಬಂದಿವೆ. ಈ ಗುಂಪುಗಳು ಧ್ಯೇಯ ಧೋರಣೆಗಳ ಭೇದದ ಆಧಾರದ ಮೇಲೆ ನಿಂತಿರದೆ ಸ್ಪರ್ಧಿಸುತಿರುವ ಮುಂದಾಳುಗಳ ಮೇಲಿನ ವೈಯಕ್ತಿಕ, ಅಭಿಮಾನ, ವಿಧೇಯತೆಗಳನ್ನೆ ಅವಲಂಬಿಸಿವೆ. ಧ್ಯೇಯ ಧೋರಣೆಗಳ ಮೇಲೆ ಗುಂಪು ಕಟ್ಟಿಕೊಳ್ಳುವದನ್ನು ಹೊಸ ಘಟನೆಯಲ್ಲಿ ಸ್ಪಷ್ಟವಾಗಿ ಪ್ರತಿಬಂಧಿಸಲಾಗಿದೆ; ಆದರಿಂದಲೆ ಸಾಮ್ಯವಾದಿಗಳು ಹೊರಬೀಳಬೇಕಾಯಿತು. ಆದುದರಿಂದ ಈಗ ವಿಶಿಷ್ಟ ಮುಂದಾಳುಗಳ ಸುತ್ತ ಗುಂಪು ಕಟ್ಟಿಕೊಂಡ ವಿವಿಧ ಪಂಗಡಗಳು ಮಾತ್ರ ಸಾಧ್ಯವಾಗಿವೆ. ಹೇಗಿದ್ದರೂ ಕಾಂಗ್ರೆಸ್ಸು ಜನರ ಮುಂದೆ ಒಗ್ಗಟ್ಟಾದ ಶಿಸ್ತುಳ್ಳ ಪಕ್ಷವೆಂದು ನಿಲ್ಲಲು ಅಸಮರ್ಥವಾಗಿದೆ. ಎಲ್ಲ ಕಡೆಗಳಲ್ಲಿಯೂ ಅಧಿಕಾರಸ್ಥವಾಗಿರುವ ಗುಂಪಿನ ವಿರುದ್ಧ ಬೇರೊಂದು ಗುಂಪು ಇದ್ದೇ ಇರುತ್ತದೆ. ಅವುಗಳೊಳಗಿನ ತಿಕ್ಕಾಟ ಬೇರೆ ಬೇರೆ ತತ್ವಗಳನ್ನನುಸರಿಸಿದ ಪಕ್ಷಗಳೊಳಗಿನ ತಿಕ್ಕಾಟಕ್ಕಿಂತ ಕಡಿಮೆ ನಿಷ್ಠುರವಾಗಿರುವದಿಲ್ಲ. ಅದಕ್ಕಿಂತ ತೀಕ್ಷ್ಣವಾಗಿದೆಯೆಂದೇ ಹೇಳಬಹುದು. ಅವು ಮಾಡುವ ಒಂದೇಒಂದು ಕೆಲಸವೆಂದರೆ ತಮ್ಮ ವಿರೋಧಿಗಳ ಮೇಲೆ ವೈಯಕ್ತಿಕ ಅಪಪ್ರಚಾರ ಮಾಡಿ ಜನತೆಯ ದೃಷ್ಟಿಯಲ್ಲಿ ಕಾಂಗ್ರೆಸ್ಸಿನ ಗೌರವವನ್ನು ಕಡಿಮೆ ಮಾಡುವದು. ಎರಡು ಗುಂಪುಗಳೂ ಒಂದೇ ಬಗೆಯ ಜನರನ್ನೊಳಗೊಂಡಿರುತ್ತವೆ; ವಿರೋಧಿಗಳನ್ನು ಸ್ಥಾನಚ್ಯುತರಾಗಿ ಮಾಡಲು ಅವೆರಡು ಉಪಯೋಗಿಸುವ ಉಪಾಯಗಳೂ ಒಂದೇ ಬಗೆಯವು. ಅಧಿಕಾರಾರೂಢವಾದ ಗುಂಪು ವಿರೋಧಿಗಳ ಮೇಲೆ ಅವಕಾಶ ಸಿಗಬಹುದಾದಾಗೆಲ್ಲ ಶಿಸ್ತಿನ ಕ್ರಮಗಳನ್ನು ಕೈಕೊಂಡು ವಿರೋಧಿ ಗುಂಪನ್ನು ಮುರಿಯಲು ವ್ಯರ್ಥವಾಗಿ ಹೆಣಗುತ್ತದೆ. ಇಂಥ ಅವಸ್ಥೆಯಲ್ಲಿ ಯಾವ ಸಂಸ್ಥೆಯೂ ಸುದೃಢವಾಗಿ ಬೆಳೆಯಲಾರದು. ಕಾಂಗ್ರೆಸ್ಸು ತನ್ನ ಹಳೆಯ ವೈಭವವನ್ನು ಕಾಯ್ದುಕೊಂಡು ಅದನ್ನು ಹೆಚ್ಚಿಸಿಕೊಳ್ಳಬೇಕಾದರೆ ಒಳಗುಂಪುಗಳ ರಾಜಕಾರಣವನ್ನು ಪೂರ್ಣವಾಗಿ ಹತ್ತಿಕ್ಕಲೇಬೇಕು. ಪರಸ್ಪರ ಸ್ಪರ್ಧಿಸುವ ಮುಂದಾಳುಗಳು ಬೇರೆ ಬೇರೆ ಪಂಗಡಗಳನ್ನು ಕಟ್ಟಿಕೊಂಡು, ಒಂದೇ ಧ್ಯೇಯಕ್ಕೆ ವಿಧೇಯತೆಯನ್ನು ವ್ಯಕ್ತಗೊಳಿಸುತ್ತ ಆದರೂ ತಮ್ಮ ತಮ್ಮೊಳಗೆ ಹೋರಾಡುತ್ತ ಕುಳಿತರೆ ಅವರು ಜನರಿಗೆ ಅಹಿತವನ್ನು ಮಾಡುವರಲ್ಲದೆ ತಾವು ಯಾವ ಸಂಸ್ಥೆಗೆ ಸೇರಿರುವರೋ ಅದನ್ನೂ ಕಟ್ಟಕಡೆಗೆ ಹಾಳುಗೆಡಹುವರು. ಅನೇಕ ಪ್ರಾಂತಗಳಲ್ಲಿ ಈಗ ಸಂಭವಿಸುತ್ತಿರುವದು ಇದೇ ಎಂದು ಹೇಳಲು ವಿಷಾದವಾಗುತ್ತದೆ. ನಾಳಿನ ಪೀಳಿಗೆಯವರಲ್ಲಿ— ಅಂದರೆ ಈಗ ಹದಿನಾರರಿಂದ ಇಪ್ಪತ್ತು ಇಪ್ಪತ್ತೆರಡು ವಯಸ್ಸಾದ ಯುವಕರಲ್ಲಿ– ಕಾಂಗ್ರೆಸ್ಸು ನಿಸ್ಸತ್ವವಾಗುತಿದ್ದು ಅದಕ್ಕೆ ಸೇರುವದು ತರುಣರಿಗೆ ಯೋಗ್ಯವಲ್ಲೆಂಬ ಭಾವನೆ ಬೆಳೆಯುತಿರುವದನ್ನು ಕಾಂಗ್ರೆಸ್ಸಿಗರು ಮನಗಂಡು ಗಾಢವಾಗಿ ವಿಚಾರ ಮಾಡಬೇಕು. ಕಾಂಗ್ರೆಸ್ಸು ತನ್ನನ್ನು ಪರಿಶುದ್ಧಗೊಳಿಸಿದೆಕೊಳ್ಳ ಹೋದರೆ ಅದು ಕೆಲ ಪ್ರಭಾವಶಾಲಿಗಳಿಂದ ರೊಕ್ಕ ತಿಂದು ಅವರು ಹೇಳಿದಂತೆ ಕುಣಿಯುವ ಜನರ ತಂಡವೆನಿಸದಿರದು. ಪಂ. ಜವಾಹರಲಾಲ ನೆಹರೂ, ಸರದಾರ ವಲ್ಲಭಭಾಯಿ ಪಟೇಲ, ಡಾ. ರಾಜೇಂದ್ರ ಪ್ರಸಾದ, ಶ್ರೀ ರಾಜಗೋಪಾಲಾಚಾರಿ, ಮೊದಲಾದ ಮೇಲ್ತರಗತಿಯ ನಾಯಕರ ಮೇಲೆ ತರುಣರಾದಿಯಾಗಿ ಇಡಿ ರಾಷ್ಟ್ರಕ್ಕಿರುವ ಆದರಾತಿಶಯದಬಲದಿಂದ ಇನ್ನೂ ಕೆಲ ಕಾಲ ಕಾಂಗ್ರೆಸ್ಸು ಅಧಿಕಾರದಲ್ಲಿ ಉಳಿಯಬಹುದು. ಆದರೆ ಅಂಥ ಪ್ರಸಂಗದಲ್ಲಿ ಕಾಂಗ್ರೆಸ್ಸು ತನ್ನ ಪುತ್ರರ ಪ್ರಕಾಶದಿಂದ ತಾನು ಬೆಳಗಿದಂತಾದೀತೇ ಹೊರತು ತನ್ನ ಪ್ರಭೆಯಿಂದ ತನ್ನ ಮಕ್ಕಳನ್ನು ಬೆಳಗಿಸಿದಂತಾಗದು. ಅಂಥ ಪ್ರಭೆ ಬಲುಗಾಲ ತಾಳಲಾರದು ಮತ್ತು ಒಮ್ಮೆ ಪದಚ್ಯುತವಾದರೆ ಕಾಂಗ್ರೆಸ್ಸು ಮುಂದೆಂದೂ ಬಲಶಾಲಿಯಾಗಲಿಕ್ಕಿಲ್ಲ.

ಕಾಂಗ್ರೆಸ್ಸಿನ ನೈತಿಕ ಮಟ್ಟವನ್ನು ಎತ್ತರಿಸಿ ಅದನ್ನು ಸೇವೆ, ಸ್ವಾರ್ಥತ್ಯಾಗಗಳ ಸಂಸ್ಥೆಯಾಗಿ ಮಾಡುವದು ಅದನ್ನು ದೇಶದ ಸತ್ತಾಧಾರಿಯಾಗಿ ಮಾಡುವದಕ್ಕಿಂತಲೂ ಮಹತ್ತರವಾದ ಕಾರ್ಯ. ಅದು ಜನಹಿತಕಾರಿ ಸಂಸ್ಥೆಯಾಗಿ ಬಾಳಬೇಕಾದರೆ ದೇಶದ ಯುವಜನರಲ್ಲಿ ಅತ್ಯುತ್ತಮರಾದವರನ್ನು, ಸೇವಾಭಾವದ ಉನ್ನತ ಧ್ಯೇಯಗಳಿಂದ ಸ್ಫೂರ್ತರಾದವರನ್ನು ತನ್ನೆಡೆಗೆ ಆಕರ್ಷಿಸಲು ಸಮರ್ಥವಾಗಬೇಕು. ದಾದಾಭಾಯಿ ನೌರೋಜಿ, ಸುರೇಂದ್ರನಾಥ ಬ್ಯಾನರ್ಜಿ, ಲೋಕಮಾನ್ಯ ತಿಲಕ ಅಥವಾ ಗಾಂಧೀಜಿಯ ನೇತೃತ್ವದಲ್ಲಿ ೧೯೦೬ ರಿಂದ ೧೯೧೮ ರ ವರೆಗೆ ಕಾಂಗ್ರೆಸ್ಸಿನಲ್ಲಿ ಸೇರಿದ ಈಗಣಹಿರಿಯ ಮಿಕ್ಕಿದಜನರುಅಧಿಕಾರ ದೊರೆತೀತೆಂಬ ಲೋಭದಿಂದ ಸೇರಿದ್ದಿಲ್ಲ. ಅದರಲ್ಲಿ ಸೇರುವದರಿಂದ ಒಂದಲ್ಲ ಒಂದು ಬಗೆಯ ಕಷ್ಟನಷ್ಟ ಅಥವಾ ಸ್ವಾರ್ಥತ್ಯಾಗಕ್ಕೆ ಈಡಾಗಬೇಕಾಗಿದ್ದಾಗ ಅವರುಸೇರಿದ್ದರು. ಕಾಂಗ್ರೆಸ್ಸು ಅಧಿಕಾರವನ್ನು ಸಂಪಾದಿಸಿದಾಗಲೂ ಆ ಗುಣವನ್ನು ಕಳೆದುಕೊಳ್ಳಬಾರದು.

೧೯೦೫ ರಿಂದ ೧೯೪೨ ರ ವರೆಗೆ ಕಾಂಗ್ರೆಸ್ಸಿಗನಾಗುವದೆ ಅಪಾಯಕರವಾಗಿದ್ದರೆ ಇಂದು ಕಾಂಗ್ರೆಸ್ಸಿಗನಾಗುವದು ಅದಕ್ಕಿಂತಲೂ ಅಪಾಯಕರವಾಗಬೇಕು. ಆ ಅಪಾಯ ಇಂಗ್ಲಂಡಿನಲ್ಲಿ ಡಾ. ಡಾಲ್ಟನ್ನರ ರಾಜಕೀಯ ಅವಸ್ಥೆಯಿಂದ ಉದಾಹೃತವಾದ ಸ್ವರೂಪದ್ದಿರಬೇಕು. ಅಪ್ಪಿತಪ್ಪಿಯಾದರೂ ರವಷ್ಟು ಕರ್ತವ್ಯಚ್ಯುತಿಯಾದರೆ ಅತ್ಯಂತ ಸಮರ್ಥ ಮನುಷ್ಯನಾದರೂ ಅಧಿಕಾರದಿಂದ ದೂರವಾಗುವ ಪ್ರಸಂಗವಿರಬೇಕು.

ಕಾಂಗ್ರೆಸ್ಸಿನ ಅವನತಿಗೆ ಕಾರಣವಾದ ಎಲ್ಲ ವಿದ್ಯಮಾನಗಳನ್ನೂ ಇಲ್ಲಿ ಚರ್ಚಿಸಿ ಮುಗಿಸಿಲ್ಲ. ಇದಕ್ಕಿಂತಲೂ ಆಳವಾಗಿ ಬೇರುಬಿಟ್ಟ ಬೇರೆ ಕಾರಣಗಳೂ ಇವೆ. ಅವೇ ಈಗ ಉಲ್ಲೇಖಿಸಿದ ಕಾರಣಗಳ ಕಾರಣಗಳಾಗಿರಬಹುದು.

ಮುಂದಿನ ವಾರ ಅವುಗಳನ್ನು ವಿವೇಚಿಸುವೆ.

ವರ್ಧಾ,

೧೪–೬–೪೮      ಕಿ. ಘ. ಮಶ್ರುವಾಲಾ

## ಸಂಸ್ಕೃತವು ಭಾರತಕ್ಕೆ ರಾಷ್ಟ್ರಭಾಷೆ

ಭಾರತದ ರಾಷ್ಟ್ರಭಾಷೆಯ ವಿಷಯವು ಬಹಳ ವರ್ಷಗಳಿಂದ ಜನರ ವಾದವಿವಾದಗಳಲ್ಲಿ ಹೊಕ್ಕು ಹೊರಟು ಇಂದು ಕಡೆಯ ತೀರ್ಪಿಗಾಗಿ ಘಟನಾಸಮಿತಿಯೆದುರು ಬರಲಿದೆ. ಭಾರತೀಯರ ಯೋಗಕ್ಷೇಮಕ್ಕೆ ಇದು ಬಹು ಮುಖ್ಯವಾದುದು ಎಂಬ ಅಂಶವನ್ನು ದೃಷ್ಟಿಯಲ್ಲಿಟ್ಟುಕೊಂಡರೆ ಆ ವಿಷಯದ ಬಗ್ಗೆ ಅತಿ ವಿಶಾಲ ವ್ಯಾಪ್ತಿಯ ಚರ್ಚೆಯನ್ನು ಸ್ವಾಗತಿಸಬೇಕಾಗುತ್ತದೆ. ಕಳೆದ ಡಿಸೆಂಬರಿನಲ್ಲಿ ಅಂತರ್ವಿಶ್ವವಿದ್ಯಾಲಯ ಸಮಿತಿಯ ಸಭೆಯಲ್ಲಿ ರಾಷ್ಟ್ರಭಾಷೆಯನ್ನಾಗಿ ಬಳಸಿಕೊಳ್ಳಲು ನಮಗೆ ಸಂಸ್ಕೃತವು ಯೋಗ್ಯವಾಗಬಹುದು ಎಂದು ಸಲಹೆ ಕೊಟ್ಟೆ. ಆ ಸಲಹೆಗೆ ಮಿಶ್ರ ಸ್ವಾಗತ ದೊರಕಿತು. ಸಲಹೆಗೆ ಸಮ್ಮತಿ ಕೊಡದವರು ಅದು ಮೃತಭಾಷೆಯೆಂದೂ ಅದನ್ನು ಕಲಿಯುವದು ಕಠಿನವೆಂದೂ ವಾದಿಸಿದುದು ತಿಳಿಯಿತು. ಕಳೆದ ತಿಂಗಳು ಹೊಸ ದಿಲ್ಲಿಯ ಮಹಿಳಾಸಮಾಜದಲ್ಲಿ ಮಾತಾಡುವಾಗ ಶ್ರೀ ವಿನೋಬಾ ಭಾವೆಯವರು (೧೯೪೮ ನೆಯ ಮೇ ತಾ. ೧೩ ರ "ಹರಿಜನ" ಪ್ರತಿಯನ್ನು ನೋಡಿರಿ) ಹಿಂದಿನ ಕಾಲದಲ್ಲಿ ಹಿಂದುಸ್ತಾನದಲ್ಲಿ ಅಂತಃಪ್ರಾಂತೀಯ ಭಾಷೆಯಾಗಿತ್ತೆಂದು ಹೇಳಿ ಅದಕ್ಕೆ ಉದಾಹರಣೆಯಾಗಿ ಶಂಕರಾಚಾರ್ಯರನ್ನು ನ್ಯಾಯವಾಗಿ ಹೆಸರಿಸಿದ್ದು ನನಗೆ ನೆನಪಿದೆ. ಆದರೆ ಅವರು ಸಾಮಾನ್ಯ ಜನರೊಡನೆ ಸಂಸ್ಕೃತದಿಂದ ವ್ಯವಹರಿಸುವದು ಅಸಾಧ್ಯವೆಂದೂ ಆ ಕಾರಣದಿಂದ ಹಿಂದುಸ್ತಾನಿಯೇ ರಾಷ್ಟ್ರಭಾಷೆಯಾಗಬಲ್ಲುದು ಎಂದೂ ಅಭಿಪ್ರಾಯಪಟ್ಟರು. ಆದೇ ಹರಿಜನ ಪತ್ರಿಕೆಯಲ್ಲಿ ಮಹಾರಾಷ್ಟ್ರ ರಾಷ್ಟ್ರಭಾಷಾ ಸಭೆಯವರು ಹಿಂದೀ ಘಟನಾಸಮಿತಿಗೆ ಬರೆದುಕೊಂಡ ವಿನಂತಿಯು ಪ್ರಕಟವಾಗಿದೆ. ಈ ಚರ್ಚೆಯಲ್ಲಿ ಒಂದು ವಿಶಿಷ್ಟಾಂಶಕ್ಕೆ ಸಾಕಷ್ಟು ಲಕ್ಷ್ಯಕೊಟ್ಟಿಲ್ಲವೆಂದು ನನಗನಿಸುತ್ತದೆ. ಅದಾವುದೆಂದರೆ ನಮ್ಮ ರಾಷ್ಟ್ರಭಾಷೆಗೆ ನಾವು ಯಾವ ಪಾತ್ರವನ್ನು ನಿರ್ವಹಿಸಲು ಅವಕಾಶವೀಯತಕ್ಕವರಿದ್ದೇವೆ? ಎಂಬುದು. ಅದು ಕೇಂದ್ರ ಸರಕಾರವು ತನ್ನ ಸರಕಾರಿ ಭವನದಲ್ಲಿ ಮತ್ತು ತನ್ನ ಆಡಳಿತದ ಪ್ರದೇಶಗಳೊಡನೆ ಮಾಡುವ ಅಧಿಕೃತ ಪತ್ರವ್ಯವಹಾರದಲ್ಲಿ ಅಥವಾ ಹೆಚ್ಚೆಂದರೆ ಕೇಂದ್ರಶಾಸನ ಸಭೆ ಮತ್ತು ಕೇಂದ್ರ ಮಹಾನ್ಯಾಯಾಲಯಗಳಲ್ಲಿ ಬಳಸುವ ಭಾಷೆ ಎಂದಿಷ್ಟೇ ಆದರೆ ಆಗ ಸಮಸ್ಯೆ ಬಹಳ ಸರಳವಾಗಿಬಿಡುತ್ತದೆ. ಆದಕ್ಕೆ ಯಾವುದಾದರೊಂದು ಭಾಷೆಯನ್ನು ಆಯ್ದುಕೊಳ್ಳಬಹುದು. ಕೇಂದ್ರ ಸರಕಾರದಲ್ಲಿ ಕೆಲಸ ಮಾಡಬೇಕೆನ್ನುವ ಇಲ್ಲವೆ ಅದರೊಡನೆ ವ್ಯವಹರಿಸಬಯಸುವ ಮನುಷ್ಯನು ಆ ಭಾಷೆಯನ್ನು ಪರಿಚಯ ಮಾಡಿಕೊಳ್ಳುವನು. ಮತ್ತು ಹಿಂದೀ ಒಕ್ಕೂಟದ ಭಾಗಗಳೊಡನೆ ಆ ಭಾಷೆಯಲ್ಲಿ ಪತ್ರವ್ಯವಹಾರ ನಡೆಸಲು ವ್ಯವಸ್ಥೆ ಮಾಡಲಾಗುವದೆಂದು ನಂಬುತ್ತೇನೆ. ಈ ಎಲ್ಲ ಸಾರ್ವಜನಿಕ ಚರ್ಚೆಯಲ್ಲೂ ಪ್ರಾಂತೀಯ ಇಲ್ಲವೆ ಪ್ರಾದೇಶಿಕ ಭಾಷೆಗಳಿಗೆ ಶಕ್ತಿಮೀರಿ ಪ್ರೋತ್ಸಾಹ ಕೊಡಬೇಕೆಂಬುದರಲ್ಲಿ ಅವುಗಳನ್ನು ಶಿಕ್ಷಣ ಮಾಧ್ಯಮವನ್ನಾಗಿ ಮಾಡುವದಲ್ಲದೆ ಪ್ರಾಂತದ ಶಾಸನ ಸಭೆ ನ್ಯಾಯಾಲಯ ಮತ್ತು ಆಡಳಿತ ಶಾಖೆಗಳಲ್ಲಿ ಅಧಿಕೃತ ಭಾಷೆಯನ್ನಾಗಿ ಮಾಡಬೇಕೆಂಬುದರಲ್ಲಿ ಒಮ್ಮತವಿರುವುದೇನು? ಹಾಗೆ ಹೇಳಲು ಕಾರಣ, ಪ್ರಾದೇಶಿಕ ಭಾಷೆಗಳ ಇಂಥ ಬೆಳವಣಿಗೆಯೊಡನೆ ಆಸೇತು ಹಿಮಾಚಲವಾಗಿ ಜನರು ತಿಳಿದು ಬಳಸುವಂಥ ರಾಷ್ಟ್ರಭಾಷೆ ಬೆಳೆಯುವದು ದುಃಸಾಧ್ಯವೇ ಸರಿ. ಪ್ರತಿಯೊಂದು ಭಾಷೆಯಲ್ಲೂ ಪ್ರಭುತ್ವ ಪಡೆಯಲು ಪೂರ್ವಾಭ್ಯಾಸ ಮತ್ತು ನಿತ್ಯದ ಬಳಕೆ ಅಗತ್ಯ. ಒಡಿಸಾದಲ್ಲಿಯ ನನ್ನ ಅನುಭವವನ್ನು ಆಧರಿಸಿ ಹೇಳುವುದಾದರೆ, ರಾಷ್ಟ್ರಭಾಷೆಯನ್ನು ಹಿಂದೀ ಒಕ್ಕೂಟದ ಪ್ರತಿಯೊಂದು ಭಾಗದ ಜನರ ಮೇಲೂ ಇಂಗ್ಲೀಷನ್ನು ಬ್ರಿಟಿಷರು ಹೇರಿದಂತೆ ಹೇರಬೇಕು. ಇಲ್ಲವೆ ಅದು ಬಹು ವಿಶಾಲ ಪರಿಧಿಯಲ್ಲಿ ಸಾಮಾನ್ಯ ಜನರಿಗೆ ತಿಳಿವಂತಿರಬೇಕು; ಅಲ್ಲದಿದ್ದರೆ ರಾಷ್ಟ್ರಭಾಷೆಗೆ ಉದ್ದಿಷ್ಟ ಸ್ಥಾನವನ್ನು ಕೊಡುವುದು ಕಠಿನ. ನೀವು ರಾಷ್ಟ್ರಭಾಷೆಯನ್ನು ಶಾಲೆಯಲ್ಲಿ ಕಲಿಸಿದರೂ ಬಳಕೆಯಿಲ್ಲದೆ ಜನರು ಅದನ್ನು ಬಹುಬೇಗ ಮರೆತುಬಿಡುವರು. ಅತಿ ಸಂಕುಚಿತ ಪರಿಧಿಯಲ್ಲಾದರೂ ಇಂಗ್ಲೀಷು ಚೆನ್ನಾಗಿ ಬಳಕೆಗೆ ಬರುವಂತಾಗಲು ಅದು ಅಧಿಕೃತ ಭಾಷೆಯಾಗಿ

( ೧೦ ನೇ ಪುಟಕ್ಕೆ )

# ಎಲ್ಲರನ್ನು ಸಂತೋಷಗೊಳಿಸುವದು ಕಠಿನ

ಹರಿಜನ ಪತ್ರಿಕೆಗಳ ಮುಖಪೃಷ್ಠದ ಮೇಲೆ 'ಮಹಾತ್ಮಾ ಗಾಂಧಿಯವರಿಂದ ಸಂಸ್ಥಾಪಿತವಾದುವು ಎಂಬ ಶಬ್ದಗಳನ್ನು ಹಾಕಿರಿ ಎಂದು ಶ್ರೀ ಬಿ. ಎಚ್. ಭರೂಚಾ ಇವರು ಮಾಡಿದ ಸೂಚನೆಗಳನ್ನು ನಾನು ಸ್ವೀಕರಿಸಿದಾಗ ಅದಕ್ಕಾಗಿ ನನಗೆ ಸಲಹೆ ಕೊಡುವ ಮತ್ತು ಬೈಯುವ ಪತ್ರಗಳ ಸುರಿಮಳೆಯಾಗಬಹುದೆಂದು ನಾನು ಎಣಿಸಿರಲಿಲ್ಲ. ಸೂಚನೆಗಳ ಕೆಲ ಮಾದರಿಗಳನ್ನು ಕೆಳಗೆ ಕೊಡುತ್ತೇನೆ.

"'ಮಹಾತ್ಮಾ ಗಾಂಧಿ' ಎಂಬುದು ಅಷ್ಟೊಂದು ಸನ್ಮಾನ್ಯ ವಾಚಕವಾದುದಲ್ಲವಾದ್ದರಿಂದ ಅದನ್ನು 'ಮಹಾತ್ಮಾ ಗಾಂಧೀಜಿ' ಎಂದು ಬದಲಿಸಿರಿ."

"ನಮ್ಮ ಪ್ರಿಯ ಬಾಪೂಜಿಯವರಿಗೆ ಬಿರುದು ಬಾವಲಿಗಳು ಸೇರುತಿದ್ದಿಲ್ಲವಾದ್ದರಿಂದ 'ಮಹಾತ್ಮಾ' ಎಂಬ ಶಬ್ದವನ್ನು ತೆಗೆದುಹಾಕಿ ಕೇವಲ 'ಗಾಂಧೀಜಿ' ಎಂದು ಬರೆಯಿರಿ."

"ಹೆಸರಿನ ಜತೆಯಲ್ಲಿ ಗಾಂಧೀಜಿಯ ಭಾವಚಿತ್ರವನ್ನೂ ಪ್ರಸಿದ್ಧಿಸಿರಿ."

"'ಮಹಾತ್ಮಾ ಗಾಂಧಿ' ಎಂಬ ಶಬ್ದಗಳನ್ನು ತೆಗೆದುಹಾಕಿರಿ. ಸಂಸ್ಥಾಪಕರು ಎಂಬ ಶಬ್ದಗಳ ಕೆಳಗೆ ಅವರ ಭಾವಚಿತ್ರವನ್ನು ಪ್ರಸಿದ್ಧಿಸಿರಿ."

"ಶಬ್ದಗಳನ್ನು ಸಂಪೂರ್ಣವಾಗಿ ಬಿಟ್ಟುಕೊಡಿರಿ, ಅವುಗಳ ಬದಲು ಮುಖಪೃಷ್ಠದ ಮೇಲೆ ಹಿಂದುಸ್ಥಾನದ ನಕ್ಷೆಯನ್ನು ಕೊಡಿರಿ. ಹಿಂದುಸ್ಥಾನದ ಬಗ್ಗೆ ಇದ್ದ ಅನಗತ್ಯ ಸಂಬಂಧವನ್ನು ತೋರಿಸಿಕೊಡುವದಕ್ಕಾಗಿ ಗಾಂಧೀಜಿಯ ಸಣ್ಣ ಭಾವಚಿತ್ರವೊಂದನ್ನು ಆ ನಕ್ಷೆಯಲ್ಲಿ ಕೊರೆಯಿರಿ."

"ಈ ಅನವಶ್ಯಕ ಶಬ್ದಗಳನ್ನು ತೆಗೆದುಹಾಕಿರಿ. ಗಾಂಧೀಜಿಯವರೇ ಈ ಪತ್ರಿಕೆಗಳ ಸಂಸ್ಥಾಪಕರು ಎಂಬುದನ್ನು ಹಿಂದುಸ್ಥಾನವು ಮರೆತಿಲ್ಲ, ಮರೆಯುವದಿಲ್ಲ."

"ನಿಮ್ಮ ಪತ್ರಿಕೆಗಳಿಗಾಗಿ ಚಂದಾದಾರರನ್ನು ಆಕರ್ಷಿಸುವದಕ್ಕಾಗಿ ಗಾಂಧೀಜಿಯ ಹೆಸರಿನ ದುರುಪಯೋಗ ಮಾಡುವುದನ್ನು ಬಿಟ್ಟುಕೊಡಿರಿ. ಅದರ ಬದಲು ಗಾಂಧೀಜಿಯ ಹಿಂದಿನ ಮತ್ತು ಪ್ರಸಿದ್ಧವಾಗದಿದ್ದ ಬರೆಹಗಳನ್ನು ಮುದ್ರಿಸಿ ಅವನ್ನು ಹೆಚ್ಚು ಉಪಯುಕ್ತ ಮಾಡಿರಿ. ಅದೇ ರೀತಿ ಗಾಂಧೀಜಿಯ ವಿಶಿಷ್ಟ ಪ್ರಸಂಗಗಳ ಬಗ್ಗೆ ಬರೆಯಿರಿ. ಉಳಿದ ವಿಷಯಗಳಿಗಿಂತ ಹೆಚ್ಚಾಗಿ ಗಾಂಧೀಜಿಯವರ ಬಗ್ಗೆಯೆ ಬರೆಯಿರಿ."

"ಹರಿಜನವನ್ನು ನಿಮ್ಮಂಥ ಲೇಖಕರ ಮುಖಪತ್ರವನ್ನಷ್ಟೇ ಮಾಡಬೇಡಿರಿ. ಎಲ್ಲವನ್ನೂ ವಿನೋಬಾ ಇವರಿಂದಲೆ ತುಂಬಬೇಡಿರಿ. ಪ್ಯಾರೇಲಾಲ, ಸುಶೀಲಾ ನಯ್ಯರ, ಕುಮಾರಪ್ಪ, ರಾಜಕುಮಾರಿ ಮೊದಲಾದ ಗಾಂಧೀಜಿಯವರ ಅತ್ಯಂತ ನಿಕಟವರ್ತಿಗಳೂ ಮೇಲಿಂದ ಮೇಲೆ ಲೇಖಗಳನ್ನು ಬರೆಯುವದು ಕರ್ತವ್ಯವಾಗಿದೆ. ಅವರು ಉಳಿದ ಚಟುವಟಿಕೆಗಳಲ್ಲಿ ತೊಡಗಿದರೂ ಈ ಕೆಲಸ ಮಾಡುವದು ಕರ್ತವ್ಯವಾಗಿದೆ. ಗಾಂಧೀಜಿ ಮತ್ತು ಹರಿಜನ ವಾಚಕರಿಗಾಗಿ ಅವರು ಸಲ್ಲಿಸತಕ್ಕ ಋಣವಿದು."

"ಪ್ರತಿವಾರ ಅವೇ ವಾಕ್ಯಗಳನ್ನು ಕೊಡುವದಕ್ಕಿಂತ ಗಾಂಧೀಜಿಯ ಅಮೃತ ವಚನಗಳನ್ನು ಕೊಡುತ್ತ ಹೋಗಿರಿ."

ಈ ಸೂಚನೆಗಳನ್ನು ಓದಿ ನನಗೆ ಎಸೋಪನ ಕತೆಗಳಲ್ಲಿಯ ಮುದುಕನು ಮತ್ತು ಅವನ ಮಗನು ಕುದುರೆಯ ನೆನಪಾಗುತ್ತದೆ. ಅವರು ದಾರಿಯಲ್ಲಿ ಬಂದ ಪ್ರತಿಯೊಬ್ಬರನ್ನು ಸಂತೋಷಪಡಿಸಹೋಗಿ ತಮ್ಮ ಕುದುರೆಯನ್ನು ಕಳೆದುಕೊಂಡ ಕತೆ ಸುಪ್ರಸಿದ್ಧವಿದೆ.

ಶ್ರೀ ಬಿ. ಎಚ್. ಭರೂಚಾ ಇವರ ಸೂಚನೆ ಸಯುಕ್ತಿಕ ಮತ್ತು ನಿರುಪದ್ರವಿಯೆಂದು ನಾನು ಅದಕ್ಕೊಪ್ಪಿಗೆಯಿತ್ತೆ. ಈ ಸಾದಾ ಶಬ್ದಗಳನ್ನೀಗ ತೆಗೆದುಹಾಕಲಾಗದು. ಭಾವಚಿತ್ರವನ್ನು ಕೊಡುವದು ಅನವಶ್ಯವಾಗಿದೆ. ಈ ಸಾದಾ ಮಾತಿನಲ್ಲಿ ಯಾರೊಬ್ಬರಿಗೆ ದುರುದ್ದೇಶ ತೋರಿಬಂದುದಕ್ಕಾಗಿ ನನಗೆ ವಿಷಾದವಾಗುತ್ತದೆ. ಜನತೆಗೆ ನನ್ನ ಉಪಯುಕ್ತತೆ, ನನ್ನ ವೈಯಕ್ತಿಕ ಅಭಿವೃದ್ಧಿ ಇಲ್ಲವೆ ನನ್ನ ಸಂದೇಶ ಪ್ರಚಾರ ಇವುಗಳಿಗೆ ಅವಶ್ಯವಿರುವುದಕ್ಕಿಂತ ಹೆಚ್ಚು ನನ್ನ ಲೋಪದೋಷಗಳ ಬಗೆಗೆ ನಾನು ಹೆಚ್ಚು ಜಾಗರೂಕನಾಗಿರುತ್ತೇನೆ. ಗಾಂಧೀಜಿಯ ಬರೆಹಗಳನ್ನು ಪುನರ್ಮುದ್ರಿಸುವದರಿಂದ ಮತ್ತು ಅವರ ಪ್ರಸಂಗ ಇಲ್ಲವೆ ಪ್ರಶಂಸೆಗಳ ಬಗೆಗೆ ಬರೆಹಗಳನ್ನು ಪ್ರಸಿದ್ಧಿಸುವದರಿಂದ ಇಲ್ಲವೆ ಅವರ ಅತಿನಿಕಟವರ್ತಿ ಅನುಯಾಯಿಗಳ ಬರೆಹಗಳಿಂದಲೂ ಹರಿಜನವು ಅಭಿವೃದ್ಧಿ ಹೊಂದಲಾರದೆಂಬುವದರ ಅರಿವು ನನಗೆ ಸಂಪೂರ್ಣ ಇದೆ. ನಮ್ಮ ಜೀವನದಲ್ಲಿಯ ಸದ್ಯದ ಅವಶ್ಯಕತೆಗಳನ್ನು ಈ ಪತ್ರಿಕೆಗಳು ಪೂರೈಯಿಸದಿದ್ದರೆ ಶಿರೋಲೇಖದ ಕೆಳಗೆ ನಾಲ್ಕು ಶಬ್ದಗಳನ್ನು ಮುದ್ರಿಸುವದರಿಂದ ಅವೆಂದಿಗೂ ಊರ್ಜಿತ ಹೊಂದಲಾರವು. ಮಾಡಲ್ಪಟ್ಟ ಬೇರೆ ಬೇರೆ ಸೂಚನೆಗಳು ನಿಷ್ಪ್ರಯೋಜಕವಾದವುಗಳೆಂದು ಇದರ ಅರ್ಥವಲ್ಲ. ಮೇಲೆ ಉಲ್ಲೇಖಿಸಲ್ಪಟ್ಟವರೆಲ್ಲ ಮತ್ತು ನಾನು ಈ ಸೂಚನೆಗಳ ಬಗ್ಗೆ ಸರಿಯಾಗಿ ಗಮನಿಸುತ್ತೇವೆ. ಆದರೆ ಪ್ರತಿಯೊಬ್ಬರನ್ನು ಸಂತೋಷಪಡಿಸಬಲ್ಲೆನೆಂದು ನಾನು ಹೇಳಲಾರೆ. ವಾಚಕರನ್ನು ನಾನು ಸಂತೋಷಪಡಿಸಬಯಸುವೆ. ಆದರೆ ಆನುಷಂಗಿಕವಾಗಿ ಮಾತ್ರ. ಸತ್ಯ ಅಹಿಂಸೆ ಮತ್ತು ಸಂಯಮವನ್ನು ಪಾಲಿಸುವದು ನನ್ನ ಮೊದಲ ಕರ್ತವ್ಯವಾಗಿದೆ ಮತ್ತು ಕೆಲ ಸಮಯ ಅಸಂತೋಷಗೊಳಿಸುವ ಪ್ರಸಂಗ ಬಂದರೂ ಜನತೆಯ ಸೇವೆ ಮಾಡುವದು ನನ್ನ ಕರ್ತವ್ಯವಾಗಿದೆ. ಪರಮಾತ್ಮನ ಇಚ್ಛೆ ಇದ್ದರೆ ಆ ಕಾರ್ಯ ನನ್ನಿಂದ ಆಗಬಲ್ಲುದು; ಇಲ್ಲದಿದ್ದರೆ ಅವನ ಸಂಕಲ್ಪದಂತೆಯೆ ಎಲ್ಲವೂ ನಡೆಯಲಿ ನನ್ನ ಇಚ್ಛೆಯಂತೆ ಅಲ್ಲ.

ವರ್ಧಾ
೧೭–೬–೧೯೪೮ ಕೆ. ಜಿ. ಮಶ್ರೂವಾಲಾ

---

## ಸಂಸ್ಕೃತವು ಭಾರತಕ್ಕೆ ರಾಷ್ಟ್ರಭಾಷೆ

( ೯ ನೆಯ ಪುಟದಿಂದ )

ಗೃಹಸ್ಥರ ಸುದ್ದಿಯಾಗಿ ಬಲವಾದ ಪತ್ರಿಕೆ ಮತ್ತು ವೇದಿಕೆಗಳಲ್ಲಿ ಪ್ರಚುರವಾಗಿ ಬಾಳಿದುದೇ ಕಾರಣ. ನಾವು ಇಂಗ್ಲೀಷು ಹೇಗೆ ಬಳಕೆಯಾಗುತ್ತಿತ್ತೋ ಅದೇ ರೀತಿ ರಾಷ್ಟ್ರಭಾಷೆಯೂ ಅದಕ್ಕಿಂತ ಸಾವಿರ ಪಾಲು ಹೆಚ್ಚು ವ್ಯಾಪ್ತಿಯಲ್ಲಿ ಬಳಕೆಗೆ ಬರಬೇಕೆಂದು ಬಯಸುವೆವೋ ಇಲ್ಲವೋ; ನಾವು ಹೀಗೆ ಬಯಸಿದರೆ ರಾಷ್ಟ್ರಭಾಷೆಯನ್ನು ಕೇಂದ್ರ ಸರಕಾರದಲ್ಲಷ್ಟೇ ಅಲ್ಲದೆ ಜನರ ನಿತ್ಯ ಜೀವನದಲ್ಲಿ ಪರಿಣಾಮಕಾರಿಯಾಗಿ ಅದನ್ನು ಬಳಸಬೇಕು. ಅಲ್ಲದಿದ್ದರೆ, ರಾಷ್ಟ್ರಭಾಷೆಯನ್ನು ವಿಸ್ತಾರವಾಗಿ ಹರಡುವದು ಒಂದು ವ್ರತರೂಪದ ಪ್ರತ್ಯೇಕವಾಗಿ ಮಾತ್ರ ಉಳಿದೀತು. ಉತ್ತರ ಹಿಂದುಸ್ಥಾನದಲ್ಲಿ ಬಹಳ ಕಡೆ ಹಿಂದುಸ್ಥಾನಿಯಲ್ಲಿ ವ್ಯವಹರಿಸುವರೆಂಬುದು ನಿಜ. ಅದು ನನ್ನ ತಾಯ್ನುಡಿ; ನನ್ನ ಪಕ್ಷಪಾತವೆಲ್ಲ ಅತ್ತಲೇ ಇದೆ. ಆದರೆ ಹಿಂದುಸ್ಥಾನಿಯನ್ನು ಬಳಸದ ಪ್ರದೇಶಗಳಲ್ಲಿ ಅದು ಸಾರ್ವಜನಿಕರಿಗೆ ತಿಳಿಯುವದಿಲ್ಲ. ಅಂಥ ಪ್ರದೇಶಗಳಲ್ಲಿ ಹಿಂದುಸ್ಥಾನಿಯ ಒಂದು ಪತ್ರಿಕೆಯೂ ಹೊರಡುತ್ತಿಲ್ಲ, ವೇದಿಕೆಯಲ್ಲಿ ಅದರ ಬಳಕೆಯಿಲ್ಲ. ಗೃಹಕೃತ್ಯದಲ್ಲಿ ಅದು ಇಂಗ್ಲೀಷು ಬಲ್ಲ ಹಿಂದೀ ಗೃಹಗಳಲ್ಲಿಯಂತೆ ಸೇರಿಕೊಂಡಿಲ್ಲ. ಆಕಾಶವಾಣಿಯಲ್ಲಿ ಕೂಡ ವಿವಿಧ ಕೇಂದ್ರಗಳಿಂದ ಸ್ಥಳೀಯ ಪ್ರಾದೇಶಿಕ ಭಾಷೆಗಳಲ್ಲೇ ಸುದ್ದಿ ಸಮಾಚಾರಗಳು ಬಿತ್ತರಿಸಲ್ಪಡುತ್ತವೆ. ಈ ದೃಷ್ಟಿಯಿಂದ ಸಂಸ್ಕೃತಕ್ಕೆ ಬಹಳ ಮಹತ್ವವಿದೆ ಎಂದು ನಾನು ಹೇಳಿದ್ದು. ಏಕೆಂದರೆ, ವಿಶಾಲ ಜನತೆಯಲ್ಲಿ ಅದೊಂದು ಪರಂಪರಾಗತ ಸಂಸ್ಕೃತಿಯ ಭಾಷೆ. ನಮ್ಮ ಪೂರ್ವೇತಿಹಾಸದಲ್ಲಿ ರಾಷ್ಟ್ರಭಾಷೆ ಎನಿಸಿತ್ತು ಎಂಬ ತಿಳಿವಳಿಕೆಯಿದೆ. ಜನರು ಅದನ್ನು ಸಾರ್ವತ್ರಿಕವಾಗಿ ಭಯಭಕ್ತಿಯಿಂದ ನೋಡುತ್ತಾರೆ. ತಮಿಳನ್ನು ಒತ್ತಟ್ಟಿಗೆ ಬಿಟ್ಟರೆ, ಬಹುಪಕ್ಷ ಎಲ್ಲ ಪ್ರಾಂತೀಯ ಭಾಷೆಗಳೂ ಒಂದೇ ಅದರ ಆಧಾರದಿಂದ ಹುಟ್ಟಿದವು, ಇಲ್ಲವೆ ಅದರ ಶಬ್ದಕೋಶದಿಂದ ಯಥೇಚ್ಛ ಲಾಭ ಪಡೆದವು ಎನಿಸಿವೆ. ರಾಷ್ಟ್ರಭಾಷೆಯನ್ನು ಅಂತಃಪ್ರಾಂತೀಯ ಭಾಷೆಯೆಂದು ನಿಯಂತ್ರಿಸಿದರೆ ಸಂಸ್ಕೃತವು ಆ ಉದ್ದೇಶವನ್ನು ಚೆನ್ನಾಗಿ ಸಾಧಿಸಿಕೊಡಬಲ್ಲದು, ಮತ್ತು ಅನಂತರ ನಾನು ಮತ್ತೂ ಮುಂದೆ ಹೋಗಿ ಸಂಸ್ಕೃತ ಬಲ್ಲವನು ಹೆಚ್ಚು ತೊಂದರೆಯಿಲ್ಲದೆ ಮಿಕ್ಕ ಪ್ರಾಂತೀಯ ಭಾಷೆಗಳ ಪರಿಚಯವನ್ನು ಮಾಡಿಕೊಳ್ಳಲು ಸಮರ್ಥನು ಎಂದು ಹೇಳುತ್ತೇನೆ. ಇದೊಂದು ವಿರೋಧಾಭಾಸವಾಗಿ ಕಾಣಬಹುದು; ಆದರೆ ಪ್ರತಿಯೊಂದು ಪ್ರಾಂತೀಯ ಭಾಷೆಯ ಜ್ಞಾನದ ಬಾಗಿಲನ್ನೂ ಸಂಸ್ಕೃತ ಭಾಷೆಯ ಜ್ಞಾನವು ತೆರೆದುಕೊಡುತ್ತದೆ ಎಂಬುದು ನಿಜಸಂಗತಿಯಾಗಿದೆ. ನನ್ನ ಅದರ ಪರಿಚಯ ಅಸಂಪೂರ್ಣವಾಗಿದೆಯಾದರೂ ಬಲ್ಲವರು ಅದನ್ನು ಸುಲಭವಾಗಿ ಕಲಿಯಲಾಗುವಂತೆ ಹೊಸ ಪದ್ಧತಿಗಳನ್ನು ರಚಿಸುವದು ಬಹು ಸುಲಭ ಎಂದು ಖಾತ್ರಿ ಮಾಡಿಕೊಟ್ಟಿದ್ದಾರೆ.

ಪೂರಿ, ೨೩–೫–೪೮ ಕೈಲಾಸನಾಥ ಕಟಜು

**ಟಿಪ್ಪಣಿ:** ಈ ವರೆಗೆ ಓಡಿಸಾದ ಈಗ ಪಶ್ಚಿಮ ಬಂಗಾಲದ ಗವರ್ನರರಾದ ಡಾ. ಕೈಲಾಸನಾಥ ಕಟಜು ಅವರು ಒಂದು ವಿಷಯವನ್ನು ಮಂಡಿಸುವ ಮೊದಲು ಆಳವಾಗಿ ಎಚ್ಚರಿಕೆಯಿಂದ ವಿಚಾರಿಸುತ್ತಾರೆ. ಅವರು ಒಂದು ವಿಷಯವನ್ನು ಎತ್ತಿಹಿಡಿದು ಮಾತನಾಡಿದರೆ ಅದನ್ನು ಹಗುರಾಗಿ ಅಲ್ಲಗಳೆಯಲು ಬಾರದು. ಹಾಗೆ ಅಲ್ಲಗಳೆವಷ್ಟು ಸಂಸ್ಕೃತವು ಲಘುಭಾಷೆಯಲ್ಲವಷ್ಟೇ ಅಲ್ಲ, ಸಂಸ್ಕೃತ ಬಲ್ಲವರ್‍ಯಾರೇ ಓಡಿಸಾಕ್ಕೆ ಹೋಗಿ ಊರಿಯಾ ಭಾಷೆಯನ್ನು ಕೇಳಿದರೆ ಆಗಿನ ಮಟ್ಟಿಗಾದರೂ ಸಂಸ್ಕೃತಕ್ಕೂ ಅದಕ್ಕೂ ವ್ಯತ್ಯಾಸವೇ ಇಲ್ಲವೇನೋ ಎಂದು ಆಶ್ಚರ್ಯಪಡಬಹುದು. ಊರಿಯಾ ಭಾಷೆಯ ಕೆಲವು ಧಾತುಗಳ ಹಾಗೂ ಇನ್ನುಳಿದ ಪದಗಳ ರೂಪಗಳು ಶುದ್ಧ ಸಂಸ್ಕೃತ ರೂಪಗಳಲ್ಲಿಯೇ ಬಳಕೆಯಾಗುತ್ತವೆ. ಇದು ಈ ಭಾಷೆಯ ವೈಶಿಷ್ಟ್ಯ. ಊರಿಯಾ ಮೂಲಾಕ್ಷರಗಳು ಕೂಡ ಹಿಂದುಸ್ಥಾನಿ ಮತ್ತು ಇನ್ನುಳಿದ ಉತ್ತರ ಭಾರತದ ಭಾಷೆಗಳಿಗಿಂದ ಪರಿಪೂರ್ಣವಾಗಿವೆ. ಇದನ್ನು ಮಹಾರಾಷ್ಟ್ರ, ಗುಜರಾತ, ಆಂಧ್ರ ಮೊದಲಾದ ಭಾಷೆಗಳ ಬಗ್ಗೆಯೂ ಹೇಳಬಹುದು. ಇನ್ನುಳಿದ ಪ್ರಾಂತಗಳಿಗಿಂತ ಓಡಿಸಾ ಪ್ರಾಂತ ಸಂಸ್ಕೃತಕ್ಕೆ ಹೆಚ್ಚು ಹತ್ತಿರವಾಗಿದ್ದ ಹಾಗೆ ತೋರುವದು. ಎಂದೇ ಓಡಿಸಾದಲ್ಲಿ ಅಧಿಕಾರಾರೂಢರಾಗುತ್ತಲೇ ಡಾ. ಕಟಜು ಅವರಿಗೆ ಸಂಸ್ಕೃತದ ಬಗ್ಗೆ ಉತ್ಸಾಹ ಉಂಟಾದುದು ನನಗೆ ಆಶ್ಚರ್ಯವನ್ನುಂಟುಮಾಡಲಿಲ್ಲ. ಆದರೆ ಸಂಸ್ಕೃತದ ಸುಂದರ ಸಾಹಿತ್ಯದ ಬಗ್ಗೆ ಮತ್ತು ಅದರ ಸ್ವರಮಾಧುರ್ಯದ ಬಗ್ಗೆ ನಮಗೆಷ್ಟೇ ಉತ್ಸಾಹ, ಪೂಜ್ಯಭಾವ, ಧಾರ್ಮಿಕ ಶ್ರದ್ಧೆ, ಪ್ರೇಮವಿದ್ದರೂ ನಮಗೀಗ ಅತ್ಯಗತ್ಯವಾಗಿರುವ ರಾಷ್ಟ್ರಭಾಷೆಯ ವಿಷಯದಲ್ಲಿ ನಮ್ಮ ವಿಚಾರಗಳು ಮಸಕಾಗಕೂಡದು.

ಅನುಕೂಲವಾದರೆ ಮುಂದಿನ ಲೇಖನದಲ್ಲಿ ಸಂಸ್ಕೃತದ ಬಗ್ಗೆ ಸಾಧಕ ಬಾಧಕಗಳನ್ನು ಕೂಲಂಕಷವಾಗಿ ವಿಮರ್ಶಿಸುವೆ. ಈಗಿಷ್ಟು ಹೇಳಬಹುದು. ಹಿಂದುಸ್ಥಾನಿ–ಹಿಂದಿ–ಉರ್ದು, ಉರ್ದು ಲಿಪಿಯನ್ನುಳಿದು, ಇವುಗಳ ಬಗ್ಗೆ ಎದ್ದ ವಾದ ಮತ್ತು ವಿರೋಧ ಸಂಸ್ಕೃತದ ಬಗ್ಗೆಯೂ ಅತ್ಯಂತ ಪ್ರಖರ ಸ್ವರೂಪದಲ್ಲಿ ಕಾಣಿಸಿಕೊಳ್ಳದಿರವು. ಶೈಲಿಯ ಮತ್ತು ಪಾರಿಭಾಷಿಕಗಳ ತೊಡಕನ್ನೂ ಇದು ಬಿಡಿಸಲಾರದು.

೧೫–೬–೪೮ ಕಿಶೋರಿಲಾಲ ಮಶ್ರೂವಾಲಾ

---

# ಅಜ್ಮೀರದಲ್ಲಿ ಶ್ರೀ ವಿನೋಬಾ ಭಾವೆ

### ಸಿಂಧೀ ನಿರಾಶ್ರಿತರು

ಪ್ರಾರ್ಥನಾ ಸಭೆಯಲ್ಲಿ ಮಾತನಾಡುತ್ತ ಶ್ರೀ. ವಿನೋಬಾ ಭಾವೆಯವರು ಕಳೆದ ೨ ದಿನಗಳಿಂದ ನಿರಾಶ್ರಿತರೊಡನೆ ತಾವು ಸಂಚರಿಸುತ್ತಿದ್ದುದಾಗಿ ಹೇಳಿದರು. ಅವರು ಪಾಕಿಸ್ತಾನದಲ್ಲಿ ಎಲ್ಲವನ್ನೂ ಕಳೆದುಕೊಂಡಿದ್ದರು. ಅವರಿಗೆ ಕೆಲವು ಮಟ್ಟಿನ ವ್ಯವಸ್ಥೆ ಮಾಡಲಾಗಿದೆ; ಆದರೂ ಅವರು ಅಸುಖಿಗಳಾಗಿದ್ದಾರೆ ಮತ್ತು ಅವರ ದುಃಖ ನಿಜವಾದುದೆಂದು ತಾವು ನಂಬುತ್ತೇವೆ ಎಂದರು. ಸ್ಥಳೀಯರು ಮೊದಲು ತೋರಿದ ಸಹಾನುಭೂತಿಯನ್ನು ಈಗ ತೋರುವುದಿಲ್ಲವೆಂದು ಆ ನಿರಾಶ್ರಿತರು ಹೇಳುತ್ತಾರೆ. ಅಜ್ಮೀರಿಗಳು ತಮ್ಮ ಹೃದಯವನ್ನು ವಿಸ್ತರಿಸಬೇಕೆಂದು ಬಿನ್ನಹ. ಇನ್ನೊಬ್ಬರ ಸುಖ ದುಃಖಗಳನ್ನು ತಿಳಿಯಬೇಕಾದರೆ ಅವನ ಸ್ಥಾನದಲ್ಲಿ ಅವನ ದೃಷ್ಟಿಯಿಂದ ನೋಡಬೇಕಾಗುತ್ತದೆ. ತನಗೆ ಸಿಂಧೀ ನಿರಾಶ್ರಿತನಿಗಾದಂತೆ ಆಗಿದ್ದರೆ ಹೇಗಾಗುತ್ತಿತ್ತೆಂಬುದನ್ನು ಅಜ್ಮೀರಿಯು ಕಲ್ಪಿಸಿ ನೋಡಿ ಅವನ ವೇದನೆಯನ್ನು ಗ್ರಹಿಸಲು ಯತ್ನಿಸಬೇಕು. ದುಃಖಿಯೊಬ್ಬನ ದುಃಖವನ್ನು ಸಂಪೂರ್ಣ ನಿವಾರಿಸಲಾಗದಿದ್ದರೂ ಸಂಶಯ ಸಹಾನುಭೂತಿಗಳನ್ನು ವ್ಯಕ್ತಪಡಿಸುವುದರಿಂದ ಅವನಿಗೊಂದು ಬಗೆಯ ಸಮಾಧಾನ ಲಭಿಸುತ್ತದೆ.

ತಮ್ಮ ಸಂಖ್ಯೆಯು ಅಧಿಕವಾಗಿದೆಯೆಂಬುದನ್ನು ಗಮನಿಸಿ ಸಿಂಧೀಯರಾದರೂ ಅಜ್ಮೀರಿಗಳಿಗೆ ತಮ್ಮನ್ನು ಸಾಕುವದು ಸುಲಭವಾಗಿಲ್ಲ ಎಂಬುದನ್ನು ತಿಳಿದುಕೊಳ್ಳಬೇಕು. ಮುಸ್ಲಿಮರನೇಕರು ಅಜ್ಮೀರನ್ನು ಬಿಟ್ಟು ಹೋದಾಕ್ಷಣ ಸುಲಭವಾಗಿ ಅಜ್ಮೀರಿಗಳು ಸಿಂಧೀ ನಿರಾಶ್ರಿತರಿಗೆ ಸ್ಥಳ ಕೊಡಬಹುದೆಂಬುದು ತಪ್ಪು. ಏಕೆಂದರೆ, ಹೊರಗೆ ಹೋದವರು ಕಸಬುಗಾರರು, ಕೂಲಿಕಾರರು, ಒಳಗೆ ಬಂದವರು (ನಿರಾಶ್ರಿತರು) ವ್ಯಾಪಾರಿಗಳು; ಅಂದರೆ ಅಜ್ಮೀರಕ್ಕೆ ಬೇಕಾದ ಜನರು ಹೊರಟು ಹೋದರು, ಬೇಡಾದವರು ಬಂದರು. ಇದರಿಂದ ಪ್ರಶ್ನೆಯು ಇಮ್ಮಡಿ ಜಟಿಲವಾಯಿತು. ಈ ಸಂಕಟವನ್ನು ದಾಟಲು ನಿರಾಶ್ರಿತರು ಕಸಬುಗಾರರಾಗಲು ಕಲಿಯಬೇಕು. ಆಗ ಮಾತ್ರ ಅವರು ಸುಖವಾಗಿರಬಲ್ಲರು. ಒಬ್ಬನು ಒಂದೆರಡು ದಿನಗಳ ವರೆಗೆ ಇದ್ದರೆ ಅವನನ್ನು ಅತಿಥಿಯೆಂದು ಸತ್ಕರಿಸಬಹುದು. ಆದರೆ ಅವನು ಅಲ್ಲೇ ಗಟ್ಟಿಹಿಡಿದು ಕುಳಿತನೆಂದರೆ ಮನೆಗೆಲಸದಲ್ಲಿ ಭಾಗವಹಿಸಬೇಕಾಗುತ್ತದೆ. ಅವನು ಹಾಗೆ ಭಾಗವಹಿಸದಿದ್ದರೆ. ಗೃಹಸ್ಥನಿಗೆ ಬೇಸರ ಬರುತ್ತದೆ. ನಿರಾಶ್ರಿತ ಮುದುಕರಲ್ಲಿ ಹಲವರು ಹುಟ್ಟಿದಂದಿನಿಂದ ಇಂದಿನವರೆಗೆ ವ್ಯಾಪಾರವನ್ನಲ್ಲದೆ ಬೇರೆ ಏನನ್ನೂ ಮಾಡಿ ಗೊತ್ತಿಲ್ಲದವರಿರುವುದರಿಂದ ಅಂಥವರಿಗೆ ವ್ಯಾಪಾರೋದ್ಯೋಗ ಸಿಗುವಂತೆ ಮಾಡಿಕೊಡಬೇಕು. ಅದು ಸಿಗಬೇಕಾದರೆ ಅವರು ಒತ್ತಟ್ಟಿಗೆ ಇರುವೆವೆಂದು ಹಟಹಿಡಿಯುವುದನ್ನು ಬಿಟ್ಟು ಬೇರೆ ಬೇರೆ ಹಳ್ಳಿ ಪಟ್ಟಣಗಳಲ್ಲಿ ಹಂಚಿ ಹರಡಿ ಹೋಗಬೇಕು. ಹರೆಯದವರು ಕಸಬುಗಾರರೂ ಕೂಲಿಕಾರರೂ ಆಗುವುದು ಯೋಗ್ಯ; ಅವರು ದೇಹಶ್ರಮದ ಕೆಲಸಗಳನ್ನು ಮಾಡಬೇಕು.

ಮೇಲಿನ ಬುದ್ಧಿವಾದವು ಕೇವಲ ಸಿಂಧೀಯರಿಗಾಗಿ ಕೊಡಲ್ಪಟ್ಟಿಲ್ಲ. ಅದು ಇಡೀ ಭಾರತಕ್ಕೇ ಒಂದು ಸಮಸ್ಯೆಯಾಗಿ ನಿಂತಿದೆ. ಪ್ರಾಮಾಣಿಕ ಶ್ರಮಜೀವನವನ್ನು ನಡೆಸುವುದರಲ್ಲಿ ತರುಣರಿಗೆ ನಂಬಿಗೆಯಿಲ್ಲವಾದರೆ, ಆವಶ್ಯಕ ಪದಾರ್ಥಗಳ ತಯಾರಿಕೆಗಾರರು ತಾವೇ ಆಗಲು ಇಷ್ಟಪಡದಿದ್ದರೆ ಮಾಡಬೇಕೇನು? ಅವರು ವಾಣಿಜ್ಯ ಮತ್ತು ಸರಕಾರೀ ನೌಕರಿಗಳನ್ನೇ ಅಪೇಕ್ಷಿಸಿದರೆ ಪ್ರತಿದಿನವೂ ಹೆಚ್ಚಾಗುತ್ತಿರುವ ಆರ್ಥಿಕ ತಳಮಳ ಮತ್ತು ಉತ್ಪಾತಗಳಿಂದ ಹಿಂದುಸ್ಥಾನವು ಎಂದೂ ಮುಕ್ತವಾಗದು. ಒಂದು ದಿನ ಈ ಗಲಭೆಗಳು ಹಿಂದು–ಮುಸಲ್ಮಾನ ಗಲಭೆಗಳಾಗಿ ಎದ್ದು ನಿಂತರೂ ನಿಂತವೇ. ಮತ್ತೊಂದು ದಿನ ಅವು ಸಿಂಧೀ ಮಾರ್ವಾಡಿದಂಗೆಗಳಾಗಿ ಎದ್ದರೂ ಎದ್ದವೇ ಅಥವಾ ಮತ್ತೇನಾದರೂ ರೂಪತಾಳಿದರೂ ತಾಳಿದವೇ ಹೇಳಬರುವಂತಿಲ್ಲ. ರೂಪಗಳು ಬದಲಾದರೂ ಮುಖ್ಯ ಸಮಸ್ಯೆ ಅದೇ ಉಳಿಯುತ್ತದೆ. ಅಂದರೆ ಸಾಮಗ್ರಿಗಳನ್ನು ತಯಾರಿಸುವ ಹೊಣೆ ಹೊರಿಸಲ್ಪಟ್ಟ ಬಡಜನರು ದುರುಪಯೋಗಕ್ಕೆ ಗುರಿಯಾಗುವರು. ಅವರಿಗೆ ಹೊಟ್ಟೆ ತುಂಬ ಊಟ ಕೂಡ ಸಿಗದಂತಾಗುವದು. ಅದೇ ಕಾಲದಲ್ಲಿ ಮಿಕ್ಕವರು ಆಹಾರೋತ್ಪಾದನೆಯಲ್ಲಿ ಯಾವ ಭಾಗವನ್ನು ವಹಿಸದಿದ್ದರೂ ಅವರಿಗೆ ತಿನ್ನಲಿಕ್ಕೆ ಬೇಕಾದ್ದಕ್ಕಿಂತ ಹೆಚ್ಚಿರುತ್ತದೆ. ಅವರು ನಿರಾಯಾಸ ಜೀವನವನ್ನು ನಡೆಸಲು ಹವಣಿಸುವರು ಮತ್ತು ನಾಳೆಗಾಗಿ ಗಳಿಸಲು ಅವರಿಗೆ ಸಾಧ್ಯವಾಗುತ್ತದೆ. ಭಾರತವೊಂದು ದೊಡ್ಡ ನಾಡು. ಅದರ ಜನಸಂಖ್ಯೆ ೩೦ ಕೋಟಿಯಿವೆ. ಇನ್ನೂ ಹೆಚ್ಚಾಗುತ್ತಿದೆ. ತಲಾ ಒಂದು ಎಕರೆ ಗದ್ದೆ ಕೂಡ ಇಲ್ಲ. ಹೀಗಿರುವುದರಿಂದ ದೇಹ ಶ್ರಮ ಮತ್ತು ಉತ್ಪಾದಕ ಉದ್ಯಮಗಳಲ್ಲಿ ಜನರು ವೃದ್ಧಿ ಹೊಂದದಿದ್ದರೆ ಅವರು ಎಂದೂ ಸುಖವನ್ನು ಕಾಣಲಾರರು. ಸ್ವರ್ಗದಲ್ಲಿ ಸುಖವಿದೆಯೆನ್ನುತ್ತಾರೆ. ಒಬ್ಬನು ಬೇಕಾದ ಹಾಗೆ ಪಲ್ಲಕ್ಕಿಯಲ್ಲಿ ಕುಳಿತು ಮಿಕ್ಕೆಲ್ಲರೂ ಹೊರುವ ಸ್ವರ್ಗ ತಮಗೆ ಬೇಡವೆಂದು ವಿನೋಬಾ ಭಾವೆ ಹೇಳಿದರು. ಪ್ರತಿಯೊಬ್ಬನೂ ತನ್ನ ಕರ್ತವ್ಯವನ್ನು ನಿರ್ವಹಿಸಬೇಕು ಎಂದು ನಿರಾಶ್ರಿತರಿಗೆ ಅವರು ಉಪದೇಶಿಸಿದರು.

—ಡಿ. ಡಿ.

---

## ಅ. ಭಾ. ವೃತ್ತಪತ್ರ ಸಂಪಾದಕರ ಪರಿಷತ್ತು

ಹಿಂದುಸ್ಥಾನ ಟಾಯಿಮ್ಸ್ ಎಂಬ ಇಂಗ್ಲೀಷ ಪತ್ರಿಕೆಯ ವ್ಯವಸ್ಥಾಪಕ ಸಂಪಾದಕರಾದ ಶ್ರೀ. ದೇವದಾಸ ಗಾಂಧಿಯವರು ಜುಲೈ ೨೩ ಕ್ಕೆ ಮುಂಬಯಿಯಲ್ಲಿ ಕೂಡುವ ಅ. ಭಾ. ವೃತ್ತಪತ್ರ ಸಂಪಾದಕರ ೭ ನೇ ಪರಿಷತ್ತಿಗೆ ಅವಿರೋಧವಾಗಿ ಅಧ್ಯಕ್ಷರೆಂದು ಆಯ್ಕೆ ಹೊಂದಿದ್ದಾರೆ.

# ರೂಪರಂಗ

## ಸಿನೆಮಗಳ ಸದ್ವಿನಿಯೋಗ

ಉಳಿದ ಉದ್ಯಮಗಳಿಗಿಂತ ಚಲಚ್ಚಿತ್ರೋದ್ಯಮವು ಬಹಳ ಕಿರಿಯದಾದರೂ ಎಷ್ಟೋ ಪ್ರಗತಿಶೀಲ ದೇಶಗಳಲ್ಲಿ ರಾಷ್ಟ್ರೀಯ ಯೋಜನೆಯಲ್ಲೂ ಅದಕ್ಕೆ ಮುಖ್ಯ ಸ್ಥಾನ ಸಿಕ್ಕಿದೆ. ಹಣ ಹಾಕಲು ಮತ್ತು ಕೆಲಸ ದೊರಕಿಸಲು ಅವಕಾಶವಿರುವುದರಿಂದ ಆರ್ಥಿಕವಾಗಿಯೂ ಪ್ರಚಾರಸಾಧನವೆನಿಸಿ ರಾಜಕೀಯವಾಗಿಯೂ ಜ್ಞಾನಪ್ರಸರಣ ಸಾಧನವೆನಿಸಿ ವಿದ್ಯಾಭ್ಯಾಸದಲ್ಲೂ ಸುಧಾರಣಾ ಪ್ರಭಾವ ಬೀರುವುದರಿಂದ ಸಾಮಾಜಿಕವಾಗಿಯೂ ಸಿನೆಮಕ್ಕೆ ಪ್ರಾಮುಖ್ಯ ಬಂದಿದೆ.

ಒಂದನೆಯ ಮಹಾಯುದ್ಧದಲ್ಲಿ ಯುರೋಪು ಸಿನೆಮವನ್ನು ಪ್ರಚಾರ ಸಾಧನವನ್ನಾಗಿ ಬಳಸಿಕೊಂಡಿತು. ಫ್ರಾನ್ಸಿನಲ್ಲಿ ಮೊಟ್ಟ ಮೊದಲು ಅದನ್ನು ವ್ಯಾಪಾರ ಸಾಧನವನ್ನಾಗಿ ಮಾಡಿಕೊಳ್ಳಲಾಯಿತು. ಇಟೆಲಿಯಲ್ಲಿ ಮುಸೋಲಿನಿಯು ವಿದ್ಯೆ ಸಂಸ್ಕೃತಿಗಳ ಪ್ರಸಾರಕ್ಕಾಗಿ ವಾಕ್ಚಿತ್ರಗಳನ್ನು ಬಳಸಿಕೊಂಡನು.

ಲೆನಿನ್ನನ ಕಾಲದಲ್ಲಿ ಅಕ್ಷರ ಪ್ರಚಾರಕ್ಕೆ ರಶಿಯವು ಸಿನೆಮವನ್ನು ಉಪಯೋಗಿಸಿತು; ಉದ್ಯಮಾಭಿವೃದ್ಧಿಗೆ ಅದರಿಂದ ಸಹಾಯ ಪಡೆಯಿತು. ಸಾಂಸ್ಕೃತಿಕ ಮತ್ತು ವಾಣಿಜ್ಯ ಅಭಿವೃದ್ಧಿಗಾಗಿ ಅಮೇರಿಕವು ಚಲಚ್ಚಿತ್ರವನ್ನು ಬಹುವಾಗಿ ವಿನಿಯೋಗಿಸಿತು. ಆ ಉದ್ಯಮಕ್ಕೆ ಸರಕಾರೀ ಪ್ರೋತ್ಸಾಹದೊರೆತು ಅದೀಗ ಅಮೇರಿಕದ ಮಹೋದ್ಯಮಗಳಲ್ಲಿ ಒಂದೆನಿಸುವ ಸ್ಥಾನವನ್ನು ಪಡೆದಿದೆ.

ಭಾರತದಲ್ಲಾದರೋ ಸಿನೆಮವು ಮೊದಲಿಂದ ಕೇವಲ ವಿನೋದಸಾಧನವೆನಿಸಿ ಬೆಳೆದು ಬಂದಿತು. ಅದರ ಬೆಳವಣಿಗೆ ಬಹಳ ಅಸ್ತವ್ಯಸ್ತವಾಗಿ ನಡೆದಿದೆ. ಸರಕಾರಕ್ಕೆ ಅದರಿಂದ ವರ್ಷಕ್ಕೆ ಅರೆಕೋಟಿ ರೂಪಾಯಿ ಆದಾಯ ದೊರಕುತ್ತಿದ್ದರೂ ಅದಕ್ಕೆ ಕೇಂದ್ರದಿಂದ ಕೇವಲ ಬಾಯುಪಚಾರ ಮಾತ್ರ ಸಿಗುತ್ತಲಿದೆ ಎಂದು “ಸಿನೆವಾಯ್ಸಿ”ನ ಒಂದು ಲೇಖದಲ್ಲಿ ಅಭಿಪ್ರಾಯ ಪಡಲಾಗಿದೆ.

ಸಿನೆಮಾ ಉದ್ಯಮಕ್ಕಿಲ್ಲಿ ಬಂಡವಾಳ ಸಾಲದಾಗಿದೆ. ನಿರ್ಮಾಪಕರು ಇದನ್ನು ನಿವಾರಿಸಲು ಸಂಘಟಿತರಾಗಿ ಕೆಲಸ ಮಾಡುವದು ಅಗತ್ಯ. ಸರಕಾರದ ನೆರವನ್ನು ಇನ್ನೂ ಹೆಚ್ಚಾಗಿ ಪಡೆವ ಯತ್ನ ಸಾಗಬೇಕಾಗಿದೆ.

ಭಾರತದ ಸಿನೆಮಗಳ ಉದ್ದೇಶ ನಿಸ್ಕೃಷ್ಟವಿಲ್ಲ. ಜನರ ವಾಮಪ್ರವೃತ್ತಿಗಳಿಗೆ ನೀರೆರೆದು ಸುಲಭವಾಗಿ ಜನಮನವನ್ನಾಕರ್ಷಿಸಿ, ದುಡ್ಡೆಳೆಯುವದೇ ನಿರ್ಮಾಪಕರಲ್ಲಿ ಬಹಳ ಮಂದಿಯ ಗುರಿಯಾಗಿದೆ. ನ್ಯೂಥಿಯೇಟರ್ಸ್, ಬಾಂಬೆ ಟಾಕೀಸ್, ಪ್ರಭಾತ್ ಫಿಲ್ಮ್ಸ್ ಮುಂತಾದ ಕೆಲವೇ ಚಿತ್ರಾಲಯಗಳಲ್ಲಿ ವಿದ್ಯೆ ಸಂಸ್ಕಾರ, ನಾಗರಿಕತೆಗಳನ್ನು ಪೋಷಿಸಬಲ್ಲ ಚಿತ್ರಗಳು ತಯಾರಾಗಿವೆ. ಯೋಜಕತ್ವವಿಲ್ಲದ ನಿರ್ಮಾಪಕರಲ್ಲಿ, ಅಯೋಗ್ಯ ಕೀಸಗಾರರನ್ನು ಕಡಿಮೆ ಸಂಬಳಕ್ಕೆ ನಿಯಮಿಸಿಕೊಂಡು ಅಧಮ ಸಲಕರಣೆಗಳಿಂದ ೩।। ಆಣೆಯ ಜವಾನೀ ಸಾಮಾನಿನಂತಹ ಚಿತ್ರಗಳನ್ನು ನಿರ್ಮಿಸಿ ಪೇಟೆಗೆ ರವಾನಿಸುವವರೇ ಬಹಳ. ಇದನ್ನು ನಿಲ್ಲಿಸಲು ಶಾಸ್ತ್ರಜ್ಞರೂ ಅಧಿಕೃತವ್ಯಕ್ತಿಗಳೂ ಮುಂದೆ ಬರಬೇಕು.

ಕಲೆಗಳಲ್ಲೆಲ್ಲ ಅತಿ ಸುಲಭವಾಗಿ ಎಲ್ಲ ದರ್ಜೆಯ ಜನರಿಗೂ ಏಕತ್ರ ನಾಟ್ಯವಿನೋದ ಮತ್ತು ಕಾಂತಾಸಮ್ಮಿತಿಯ ಉಪದೇಶಗಳನ್ನು ಒದಗಿಸಲು ಅನುಕೂಲ ಸಾಧನವೆಂದರೆ ಸಿನೆಮವೇ. ಆದುದರಿಂದ ಇದರ ಬಗ್ಗೆ ಸಾಹಿತಿಗಳೂ ನಾಟ್ಯವಿನೋದ ವಿಶಾರದರೂ ಲಕ್ಷ್ಯವಿತ್ತು ಹಿಂದೀ ಸಂಸ್ಕೃತಿ ಪರಂಪರೆಗಳ ಉಚ್ಚ ನಿದರ್ಶನವನ್ನು ಜಗತ್ತಿಗೆ ಪ್ರದರ್ಶಿಸುವ ಮತ್ತು ತಾಯ್ನಾಡಿನಲ್ಲಿ ಪಸರಿಸುವ ಚಿತ್ರಗಳ ನಿರ್ಮಿತಿ ಹೆಚ್ಚುವಂತೆ ಪ್ರಯತ್ನಿಸುವದು ಅತ್ಯವಶ್ಯಕ. ವಿದ್ಯಾಭ್ಯಾಸದಲ್ಲಿ ಬಹಳ ಹಿಂದುಳಿದ ಭಾರತವು ಸಿನೆಮಗಳ ಮೂಲಕ ಪ್ರಪಂಚದ ಸಾಮಾನ್ಯ ಜ್ಞಾನ ಮತ್ತು ನಾಗರಿಕ ಲಕ್ಷಣ ಇವುಗಳನ್ನು ಆಬಾಲವೃದ್ಧರಿಗೆ ಅತಿ ವಿಸ್ತಾರವಾದ ವ್ಯಾಪ್ತಿಯಿಂದ ದೊರಕುವಂತೆ ಮಾಡಬಹುದಾಗಿದೆ. ಪುಸ್ತಕ ಭಂಡಾರ, ವಾಚನಾಲಯ, ಅಕ್ಷರ ಪ್ರಸಾರ, ಸಾರ್ವಜನಿಕ ಭಾಷಣ, ರೇಡಿಯೋ, ಈ ಎಲ್ಲ ಸಾಧನಗಳಿಗಿಂತ ಹಿಂದುಸ್ತಾನದ ಲಕ್ಷೋಪಲಕ್ಷ ಹಳ್ಳಿಗಳಲ್ಲಿ ಅತ್ಯಾಧುನಿಕ ನಾಗರಿಕ ಸಂಸ್ಕಾರ ಮತ್ತು ಜ್ಞಾನಗಳನ್ನು ಪಸರಿಸಲು ಸಿನೆಮವೇ ಅತಿ ಸುಲಭ ಪರಿಣಾಮಿಯಾದ ಸಾಧನವೆಂದು ಯಾರಿಗಾದರೂ ವಿಚಾರಿಸಿದರೆ ತಿಳಿಯದಿರದು. ನಮ್ಮ ವಿದ್ಯಾಶಾಸ್ತ್ರಜ್ಞರು ಇತ್ತ ಗಮನಿಸುವರೆ? ಸರಕಾರದ ವಿದ್ಯಾಖಾತೆ ಈ ಮಾತನ್ನು ಮನನ ಮಾಡುವದೋ?

—ಕಾಮರೂಪ

“ಹುವಾ ಸವೇರಾ” ಎಂಬ ಚಿತ್ರಪಟದಲ್ಲಿ ಮುಖ್ಯ ಪಾತ್ರ ವಹಿಸಿದ ಸಪ್ರು

## ಹುವಾ ಸವೇರಾ

ಜೀವನ ಕಲಾ ಚಿತ್ರಾಲಯದಲ್ಲಿ ‘ಹುವಾ ಸವೇರಾ’ ಎಂಬ ಚಿತ್ರವನ್ನು ತಯಾರಿಸಲಾಗಿದೆ. ಶ್ರೀ ಕುಲಭೂಷಣ ಅಗ್ರವಾಲರು ದಿಗ್ದರ್ಶಕರು. ಶ್ರೀ ಜ್ಞಾನದತ್ತರು ಸಂಗೀತ ನಿರ್ದೇಶಕರು. ಗೀತ ಮತ್ತು ಕಥೆಗಳನ್ನು ಶ್ರೀ ಬಿ. ಪಿ. ವಾಜಪೇಯಿಯವರು ರಚಿಸಿದ್ದಾರೆ. ಶಾರದ ಶುಕ್ಲರ ನೃತ್ಯವಿದೆ. ನಿರ್ಮಾಪಕರು ಶ್ರೀ ಹೀರಾಲಾಲ ಪಟೀಲರು. ನಯನತಾರೆ, ದಾರ ಕಾಶ್ಮೀರಿ, ಹೀರಾಸಾವಂತ ಮತ್ತು ಪ್ರೇಮಕಾಂತರು ಉಪಪಾತ್ರಗಳನ್ನೂ ಸಪ್ರು ಮುಖ್ಯ ಪಾತ್ರವನ್ನೂ ಅಭಿನಯಿಸಿದ್ದಾರೆ.

ಪ್ರಕಾಶ (ಸಪ್ರು) ನೊಬ್ಬ ರಾಜಕೀಯ ಕೈದಿ. ಅವನು ೧೫ ನೇ ಆಗಸ್ಟಿನಲ್ಲಿ ಸೆಂಟ್ರಲ್ ಜೇಲಿನಿಂದ ಹೊರಬೀಳುತ್ತಾನೆ. ಅವನು ತನ್ನ ಜಹಗೀರಿಗೆ ಹೋಗುತ್ತಾನೆ. ಸ್ವಾತಂತ್ರ್ಯ ವೀರನಾದ ಅವನನ್ನು ಛಾಯಾ (ನಯನತಾರಾ) ಪ್ರೀತಿಸತೊಡಗುವಳು.

ಅಜಿತನಿಗೆ (ಪ್ರೇಮಕಾಂತ) ಪ್ರಕಾಶನ ಏಳಿಗೆಯನ್ನು ಸಹಿಸಲಾಗಲಿಲ್ಲ. ಅವನು ಅವನ ದಾಯಾದ ಸಹೋದರ. ಅಜಿತನೂ ಬಿಹಾರಿಯೆಂಬ ಆಡಳಿತಾಧಿಕಾರಿಯೂ ಪ್ರಕಾಶನನ್ನು ದ್ವೇಷಿಸುತ್ತಾರೆ. ಅವರು ಅಜಿತನ ನಾಟಕ ಮಂದಿರಕ್ಕೆ ಬೆಂಕಿಹಚ್ಚಿ ಹುಡುಗಿಯೊಬ್ಬಳನ್ನು ಕದ್ದೊಯ್ಯುತ್ತಾರೆ. ಪ್ರಕಾಶನು ತಪ್ಪುಗಾರನೆಂದು ಜನ ತಿಳಿಯುತ್ತದೆ. ಅವನಿಗೆ ಗಾಯವಾಗಿ ಆಸ್ಪತ್ರೆ ಕಾಣುತ್ತಾನೆ.

ಅಜಿತನು ಆಸ್ಪತ್ರೆಯ ನರಸಮ್ಮನಾದ ರೇಖೆಯನ್ನು ವಂಚಿಸಿ ಅವಳ ಶೀಲಭಂಗಮಾಡುತ್ತಾನೆ. ಛಾಯಾ ಪ್ರಕಾಶರ ವಿವಾಹಕ್ಕೆ ಅಜಿತ ಬಿಹಾರಿಗಳು ವಿಘ್ನವೊಡ್ಡುತ್ತಾರೆ. ಅಜಿತರು ರೇಖೆಯು ತನ್ನ ಮಗುವಿನೊಡನೆ ಮದುವೆ ಹಂದರಕ್ಕೆ ಬಂದು ತನ್ನ ಮಗು ಪ್ರಕಾಶನಿಂದಾಯಿತೆಂದು ಹೇಳುವಂತೆ ಮಾಡುತ್ತಾನೆ. ಆದರಿಂದ ಕ್ರುದ್ಧನಾದ ಪ್ರಕಾಶನು ಕಾಡಿಗೆ ಹೋಗುತ್ತಾನೆ. ರೇಖೆ ಅಜಿತನಿಂದ ವಂಚಿತಳಾಗಿ ಅನಿವಾರ್ಯ ದುಃಖಕ್ಕೊಳಗಾಗುತ್ತಾಳೆ. ಪರಿಸ್ಥಿತಿಯ ಒತ್ತಾಯದಿಂದ ಕಡೆಯಲ್ಲಿ ಅಜಿತನು ಅಪರಾಧ ಒಪ್ಪುವಂತಾಗಿ ಕಾಡಿನಲ್ಲೇ ಛಾಯಾ ಪ್ರಕಾಶರ ಪುನರ್ಮಿಲನವಾಗುತ್ತದೆ!

## ಇಂಗ್ಲೀಷಿನಲ್ಲಿ ‘ಶಹಜಹಾನ’

ಈಸ್ಟ್ ಎಂಡ್ ವೆಸ್ಟ್ ಮೂವಿಸಿನವರು ವಿಷ್ಣುಸೇನರ ನೇತೃತ್ವದಲ್ಲಿ ಭಾರತೀಯ ಚಿತ್ರಗಳನ್ನು ಇಂಗ್ಲೀಷಿನಲ್ಲಿ ತಯಾರಿಸುವ ಹೊಸ ಸಾಹಸಕ್ಕೆ ಕೈಯಿಕ್ಕಿದ್ದಾರೆ. ಸದ್ಯಃ ‘ಶಹಜಹಾನ’ನ್ನು ಇಂಗ್ಲೀಷಿನಲ್ಲಿ ತಯಾರಿಸಿ ಅಂತಾರಾಷ್ಟ್ರೀಯ ಪೇಟೆಗೆ ಕಳಿಸುವ ಪ್ರಯತ್ನ ನಡೆದಿದೆ. ಎಮಿಲಿಜೋಲಾದ ದಿಗ್ದರ್ಶಕರಾದ ವಿಲಿಯಂ ಡೈಟರ್ಲರನ್ನು ದಿಗ್ದರ್ಶನಕ್ಕೆ ಕರೆಯಲಾಗಿದೆ. ಲಾರೆನ್ಸ್ ಒಲಿವಿಯರನು ಶಹಜಹಾನನ ಪಾತ್ರವನ್ನು ಅಭಿನಯಿಸುವನು. ಮುಮತಾಜ ಮಹಲಳ ವೇಷಕ್ಕೆ ಯಾವ ತಾರೆಯನ್ನೂ ಈ ವರೆಗೆ ಆರಿಸಿಲ್ಲ.

## ‘ಕಮ್ಯುನಿಝಂ’ ಎಂದರೇನು?

[ ೫ನೆಯ ಪುಟದಿಂದ ]

ಅದರ ಸ್ಥಾಪನೆಯಾದರೆ ಸಾಲದು. ಇಡೀ ಜಗತ್ತಿನಲ್ಲಿ ವ್ಯಾಪಿಸಿದರೆ ಮಾತ್ರ ಅದು ಯಶಸ್ವಿಯಾಗಬಲ್ಲದು. ಇದು ಕಮ್ಯುನಿಸ್ಟ ಸಿದ್ಧಾಂತದ ಒಂದು ಅಂಗ. ಆದುದರಿಂದ ಜಗತ್ತಿನ ಕಮ್ಯುನಿಸ್ಟರು ಒಂದು ಅಂತರ್ ರಾಷ್ಟ್ರೀಯ ಸಂಸ್ಥೆಗೆ ಅಧೀನವಾಗಿ ನಡೆದುಕೊಳ್ಳುತ್ತಾರೆ. ಕಾರ್ಲ ಮಾರ್ಕ್ಸನೇ ಸ್ಥಾಪಿಸಿದ “ಮೊದಲನೆ ಅಂತರ್ ರಾಷ್ಟ್ರೀಯ” ಮತಭೇದದ ಕಾರಣದಿಂದ ಮುರಿದುಹೋಯಿತು. “ಎರಡನೆ ಅಂತರ್ ರಾಷ್ಟ್ರೀಯ” ಸಾಮ್ಯವಾದಿಗಳದು. “ಮೂರನೆ ಅಂತರ್ ರಾಷ್ಟ್ರೀಯ” ಲೆನಿನ್ನನ ಪ್ರಭಾವಕ್ಕೊಳಗಾಗಿ ಕೆಲಸಮಾಡಿತು. ರಶಿಯಾದಲ್ಲಿ ಕೂಲಿಕಾರ ರಾಜ್ಯ ಸ್ಥಾಪನೆಯಾದಂದಿನಿಂದ ಅದರ ಮುಖ್ಯ ಕಚೇರಿ ಮಾಸ್ಕೋಕ್ಕೆ ವರ್ಗಾಯಿಸಲ್ಪಟ್ಟಿತು. ಅಂದಿನಿಂದ ಜಗತ್ತಿನ ಬೇರೆ ಬೇರೆ ದೇಶಗಳಲ್ಲಿನ ಕಮ್ಯುನಿಸ್ಟ ಪಕ್ಷಗಳ ಚಟುವಟಿಕೆಯೂ ಹೆಚ್ಚಾಯಿತು. ಆಯಾ ದೇಶದ ಬೂರ್ಜ್ವಾ ಸರಕಾರಗಳನ್ನು ಧ್ವಂಸ ಮಾಡಿ ಕಮ್ಯುನಿಸ್ಟ ರಾಜ್ಯವನ್ನು ಸ್ಥಾಪಿಸಲು ಅಂತರ್ ರಾಷ್ಟ್ರೀಯ ಕಮ್ಯುನಿಸ್ಟ ಸಂಘದ ಆದೇಶದ ಮೇರೆಗೆ ಕಮ್ಯುನಿಸ್ಟರು ಹೆಣಗುತ್ತ ಬಂದರು. ಆದರೆ ೧೯೪೩ ರಲ್ಲಿ ಮಿತ್ರರ ಪಕ್ಷದಲ್ಲಿ ರಶಿಯಾ ಯುದ್ಧಕ್ಕಿಳಿದ ಮೇಲೆ ಸ್ಟಾಲಿನ್ನನು ಮಿತ್ರರ ಸಂದೇಹಗಳನ್ನು ದೂರ ಮಾಡಲು “ಅಂತರ್ ರಾಷ್ಟ್ರೀಯ”ವನ್ನು ವಿಸರ್ಜಿಸಿ ಕಮ್ಯುನಿಸ್ಟರ ಕೇಂದ್ರ ಸಂಸ್ಥೆ ಇಲ್ಲದಂತೆ ಮಾಡಿದನು.

ಆದರೆ ೬೫ ರಾಷ್ಟ್ರಗಳ ಈಗ ಸ್ವತಂತ್ರವಾದ ಈ ಕಮ್ಯುನಿಸ್ಟ ಪಕ್ಷಗಳು ಇಂದಿಗೂ ಎಲ್ಲ ಮಹತ್ವದ ಪ್ರಶ್ನೆಗಳಲ್ಲಿ ಒಂದೇ ಬಗೆಯ ಅಭಿಪ್ರಾಯ ಕಾರ್ಯ ಪದ್ಧತಿಗಳನ್ನು ಪ್ರದರ್ಶಿಸುವದು ಆಶ್ಚರ್ಯಕ್ಕೆ ಕಾರಣವಾಗಿದೆ. ಮಾಸ್ಕೋದ ಗುಪ್ತ ಸಹಾಯ, ಬಂಗಾರದ ಗಟ್ಟಿಗಳು ಅವರನ್ನು ಕೆಲಸ ಮಾಡಿಸುತ್ತವೆ, ನುಡಿಸುತ್ತವೆ ಎಂದು ನಿಂದಿಸುವವರುಂಟು. ಆದರೆ ಜಗತ್ತಿನ ಕೋಟ್ಯಂತರ ಕಮ್ಯುನಿಸ್ಟರ ಚಟುವಟಿಕೆಗಳು ಅಂತರ್ ರಾಷ್ಟ್ರೀಯ ಗುಪ್ತಚಾರರ ಸೂತ್ರಚಾಲನೆಯೆಂದು ನಂಬುವದು ಕಠಿನ. ರಶಿಯನ್ ಬೊಕ್ಕಸದ ಉತ್ಪನ್ನ ಇಷ್ಟೆಲ್ಲ ಚಟುವಟಿಕೆಗಳ ವೆಚ್ಚದ ಒಂದಂಶವನ್ನು ಕೂಡ ತುಂಬಲು ಸಾಲದು.

### ಕಮ್ಯುನಿಸ್ಟರ ಸಂಘಟನೆಯ ಮರ್ಮ

ಹಾಗಾದರೆ ೬೫ ರಾಷ್ಟ್ರಗಳ ಕಮ್ಯುನಿಸ್ಟರನ್ನು ಒಮ್ಮುಖವಾಗಿ, ಬಿಗಿಯಾದ ಚಳವಳಿಯಾಗಿ ಇಡುವ ಶಕ್ತಿ ಯಾವದು? ಇದಕ್ಕೆ ಉತ್ತರವಿಷ್ಟೆ: ಕಮ್ಯುನಿಝಂ ಮೊದಲೇ ಸೂಚಿಸಿದಂತೆ ಒಂದು ಅಂತರ್ ರಾಷ್ಟ್ರೀಯ ಸಿದ್ಧಾಂತ. ಆದುದರಿಂದ ಬೇರೆ ಬೇರೆ ದೇಶಗಳಲ್ಲಿರುವ ಕಮ್ಯುನಿಸ್ಟರು ತಾವೆಲ್ಲ ಪರಸ್ಪರ ಶಾಶ್ವತ ಮಿತ್ರರೆಂದು ಬಗೆದು ರಾಷ್ಟ್ರೀಯ ಅಂತರ್ ರಾಷ್ಟ್ರೀಯ ಹೋರಾಟಗಳಲ್ಲಿ ಸಹಕರಿಸುತ್ತಾರೆ. ಕಠೋರ ತರಬೇತಿಯ ಫಲವಾಗಿ ಅವರಲ್ಲಿರುವ ಮಾತೃಭೂಮಿ, ಬಂಧುಬಾಂಧವರೆಂಬೀ ಮೊದಲಾದ ಮೃದುಭಾವನೆಗಳು ಅಳಿದು ಕೇವಲ ಕಮ್ಯುನಿಝಂ ಹಾಗು ಕಮ್ಯುನಿಸ್ಟ ಪಕ್ಷದ ಬಗ್ಗೆ ಅಂಧ ನಿಷ್ಠೆ, ವಿಧೇಯತೆಗಳು ಬೇರೂರಿರುತ್ತವೆ. ಈ ವರೆಗೆ ರಶಿಯದಲ್ಲಿ ಮಾತ್ರ ಪೂರ್ಣ ಕಮ್ಯುನಿಸ್ಟ ರಾಜ್ಯ ಸ್ಥಾಪಿತವಾಗಿರುವದರಿಂದ ಸ್ವಾಭಾವಿಕವಾಗಿ ಅವರಿಗೆ ತಮ್ಮ ಮಾತೃಭೂಮಿಗಿಂತಲೂ ರಶಿಯವೆ ಆದರಪಾತ್ರವಾಗಿರುತ್ತದೆ. ಅದರಿಂದ ಅವರು ಎಲ್ಲ ಬಗೆಯ ಆದೇಶ, ಮಾರ್ಗದರ್ಶನಗಳಿಗಾಗಿ ಆ ಕಡೆಯೆ ನೋಡುವದರಲ್ಲಿ ಆಶ್ಚರ್ಯವಿಲ್ಲ. ಮತ್ತು ಕೊನೆಯದಾಗಿ ಕಡುತರವಾದ ಶಿಸ್ತಿನ ಬಲದಿಂದ ಅಂತರ್ ರಾಷ್ಟ್ರೀಯ ಮತ್ತು ರಾಷ್ಟ್ರೀಯ ಕಮ್ಯುನಿಸ್ಟ ಪಕ್ಷಗಳು ಚಂಚಲ ಬುದ್ಧಿಯ ಇಲ್ಲವೇ ದ್ರೋಹಬುದ್ಧಿಯ ಸದಸ್ಯರನ್ನು ಹೊರ ತಳ್ಳಿದರೂ ಅದರ ಸಂಘಟನೆ ಕೆಡುವದಿಲ್ಲ.

ಮಾಸ್ಕೋದಲ್ಲಿ ೧೯೪೩ ರ ವರೆಗಿದ್ದ ಅಂತರ್ ರಾಷ್ಟ್ರೀಯ ಕಮ್ಯುನಿಸ್ಟ ಪಕ್ಷ ವಿವಿಧ ದೇಶಗಳಲ್ಲಿನ ಕಮ್ಯುನಿಸ್ಟ [illegible] ತನ್ನ ನಿರ್ಣಯಗಳನ್ನು [illegible] ಹೊರಿಸುತ್ತಿತ್ತೆಂಬ ಕೆಲವರ ಭಾವನೆ [illegible] “ಅಂತರ್ ರಾಷ್ಟ್ರೀಯ [illegible] ರಾಷ್ಟ್ರೀಯ ಕಮ್ಯುನಿಸ್ಟ ಪಕ್ಷಗಳ [illegible] ಧ್ಯವಿದ್ದೇ ಇರುತ್ತಿತ್ತು. ೧೯೩೩ ರಲ್ಲಿ [illegible] ಸದಸ್ಯತ್ವ ೧೦೦೦ ರಷ್ಟಿತ್ತೆಂದು [illegible] ಅದರ ದಕ್ಷತೆಯ ಅರಿವಾಗಬಹುದು. [illegible] ಅಂತರ್ ರಾಷ್ಟ್ರೀಯ ಪಕ್ಷದ [illegible] ರಾಷ್ಟ್ರೀಯ ಪಕ್ಷಗಳ ಮುಖ್ಯ [illegible] ಶಾಶ್ವತವಾಗಿರುತ್ತಿದ್ದರು. [illegible] ವಿಷಯದಲ್ಲಿ ಅಂತರ್ ರಾಷ್ಟ್ರೀಯ [illegible] ರಾಷ್ಟ್ರೀಯ ಪಕ್ಷಗಳಲ್ಲಿ ಮತಭೇದ [illegible] ಅಂತರ್ ರಾಷ್ಟ್ರೀಯದ ಪ್ರತಿನಿಧಿ [illegible] ರಾಷ್ಟ್ರೀಯ ಕಾರ್ಯ ಸಮಿತಿಯೂ ಸೇರಿ [illegible] ಕಾಲ ಚರ್ಚಿಸುತ್ತಿದ್ದರು. ಕಮ್ಯುನಿಸ್ಟ ಸೈದ್ಧಾಂತಿಕ ಉಪದೇಶದ ಪರಿಣಾಮವಾಗಿ ಅಂತರ್ ರಾಷ್ಟ್ರೀಯ ಮುಂದಾಳುಗಳ ಅಭಿಪ್ರಾಯವನ್ನೇ ಕಟ್ಟಕಡೆಗೆ ರಾಷ್ಟ್ರೀಯ [illegible] ಸಮಿತಿ ಮನವಾರೆ ಒಪ್ಪಿಕೊಳ್ಳುತಿತ್ತು. ಪಕ್ಷದ ಶಿಸ್ತಿನ ಬಿಗುಹು, ಮಾರ್ಕ್ಸನ ಸಿದ್ಧಾಂತದ ಮೇಲಿನ ಅಂಧ ಶ್ರದ್ಧೆ ಇವು ಕಮ್ಯುನಿಸ್ಟರ ಸ್ವತಂತ್ರ ವಿಚಾರ ಶಕ್ತಿಯನ್ನೇ ಅಳಿಸಿಬಿಟ್ಟಿವೆ.

### ಶಿಸ್ತಿನ ಬಿಗುಹು

ಕಮ್ಯುನಿಸ್ಟ ಪಕ್ಷದ ಸದಸ್ಯನಾಗುವದೇನು ಸುಲಭ ಕೆಲಸವಲ್ಲ. ಒಳಸಂಚು, ಗೋಪ್ಯ, ಅಧಿಕಾರಾಪಹರಣಗಳೇ ನಿತ್ಯ ರೂಢಿಯಾದ ಈ ಪಕ್ಷದ ಶಿಸ್ತು ಅತ್ಯಂತ ನಿಷ್ಠುರವಾಗಿದೆ. ಮಾರ್ಕ್ಸವಾದದ ಒಲವಿದ್ದವರನ್ನು ಮೊದಲು ಯಾವುದಾದರೊಂದು ಕಮ್ಯುನಿಸ್ಟ ಪಕ್ಷಪಾತಿ ಸಂಸ್ಥೆಯಲ್ಲಿ ಸೇರಿಸಿಕೊಳ್ಳುವರು. ಅಲ್ಲಿ ಕೆಲ ತಿಂಗಳುಗಳ ವರೆಗೆ ಅವನ ಚಟುವಟಿಕೆ ಸಮಾಧಾನಕರವಾಗಿದ್ದರೆ ಅವನನ್ನು “ಸಹಾನುಭವಿ” ಗಳ ವರ್ಗದಲ್ಲಿ ಸೇರಿಸಿಕೊಳ್ಳಲಾಗುವದು. ಆ ಅವಧಿಯಲ್ಲಿ ಅವನ ಚರ್ಯೆ, ಲೇಖನ, ಭಾಷಣ, ಮಾತುಕಥೆಗಳ ಸೂಕ್ಷ್ಮ ಪರೀಕ್ಷೆಯ ನಂತರ ಸದಸ್ಯತ್ವಕ್ಕೆ ಅರ್ಹತೆ ಕೊಡುವರು. ಸದಸ್ಯನಾದ ಮೇಲೂ ಅನೇಕ ಕಾಲ ಅವನು ಸ್ವಬುದ್ಧಿಯನ್ನವಲಂಬಿಸಿ ಕಾರ್ಯ ಮಾಡಲಾರ. ಪಕ್ಷದ ಮುಂದಾಳು ಅವನನ್ನು ಪ್ರಾಮುಖ್ಯ ವಿಷಯಗಳಲ್ಲಿ ಭಾಗವಹಿಸಲು ಕೇಳಿಕೊಂಡ ಮೇಲೆಯೆ ಅವನ ಸ್ಥಾನ ಸ್ಥಿರವಾದಂತೆ. ಆದುದರಿಂದ ಪ್ರತಿ ಸದಸ್ಯನೂ ಹೆಚ್ಚು ಹೆಚ್ಚು ದಕ್ಷತೆ, ಪ್ರಾಮಾಣಿಕತೆ, ನಿಷ್ಠೆಯತೆಗಳನ್ನು ತೋರಿಸಿ ಮೇಲೇರಬೇಕಾಗುವದು. ಸಮರ್ಥನಾಗಿದ್ದರೆ ಒಂದೊಂದೇ ಅಂತಸ್ತು ಏರಿ ಅಂತರ್ ರಾಷ್ಟ್ರೀಯ ಸದಸ್ಯತ್ವ ಕೂಡ ಅವನಿಗೆ ಲಭಿಸಬಹುದು. ಯಾರೊಬ್ಬನ ಮೇಲೆ ಸ್ಥಾನಿಕ ನಾಯಕರು ಮುನಿದರೆ, ರಾಷ್ಟ್ರೀಯ, ಅಂತರ್ ರಾಷ್ಟ್ರೀಯ ಸಮಿತಿಗಳ ವರೆಗೂ ಅವನು ದೂರು ಒಯ್ಯಬಹುದು. ಆದರೆ ರಾಷ್ಟ್ರೀಯ ಸಮಿತಿಯ ನಿರ್ಣಯಗಳನ್ನು ಅಂತರ್ ರಾಷ್ಟ್ರೀಯ ಸಮಿತಿ ತಿರಸ್ಕರಿಸಿದ ಉದಾಹರಣೆಗಳು ತೀರ ಅಪೂರ್ವ.

ಪ್ರತಿಯೊಬ್ಬ ಕಮ್ಯುನಿಸ್ಟನೂ ಶಾಶ್ವತವಾದೊಂದು ಆವೇಶದಲ್ಲಿರುತ್ತಾನೆ. ಕಮ್ಯುನಿಸ್ಟ ಸಮಾಜವನ್ನು ಜಗತ್ತಿನಲ್ಲೆಲ್ಲ ಸ್ಥಾಪಿಸುವ ಮಹಾಧ್ಯೇಯದ ಸಾಧನ ತಾನೆಂಬ ಭಾವನೆ ಅವನಲ್ಲಿ ಸದಾ ಜಾಗ್ರತವಾಗಿರುತ್ತದೆ. ಜಗತ್ತಿನ ಒಂದೇ ಒಂದು ಕಮ್ಯುನಿಸ್ಟ ಸರಕಾರವಾದ ರಶಿಯನ್ ಸರಕಾರ ಯಾವ ತಪ್ಪೂ ಮಾಡಲಾರದು; ತಾನು ಅದಕ್ಕೆ ಯಾವಾಗಲೂ ಬೆಂಬಲವೀಯಬೇಕೆಂಬ ನಿಷ್ಠೆ ಶ್ರದ್ಧೆಗಳು ಅವನಲ್ಲಿ ಓತಪ್ರೋತವಾಗಿರುತ್ತವೆ. ಕಮ್ಯುನಿಸ್ಟನು ತಮೋಜೀವಿ, ಒಂದು ಬಗೆಯ ಧರ್ಮಾಂಧ. ಎಲ್ಲ ಧರ್ಮಾಂಧರಂತೆ ಅವನು ತನ್ನ ಮಾಸ್ಕೋದ “ಗುರು” ಗಳ ದಾಸ.

ಕಮ್ಯುನಿಸ್ಟರು ಅಧಿಕಾರವನ್ನು ಕಸಿದುಕೊಂಡ ರಾಜ್ಯಗಳಲ್ಲಿ ಸುಖಶಾಂತಿಮಯ ಸಮಾಜವನ್ನು ಸ್ಥಾಪಿಸಲು ಈ ವರೆಗಂತೂ ಸಮರ್ಥರಾಗಿಲ್ಲ. ಬದಲಿಗೆ ನಾಯಕರ ಅಧಿಕಾರಲಾಲಸೆಯಿಂದ ರಶಿಯನ್ ಕ್ರಾಂತಿಯನ್ನು ಸಾಧ್ಯವಾಗಿ ಮಾಡಿದ ಮುಂದಾಳುಗಳಲ್ಲಿ ಸ್ಟಾಲಿನ್ನನೊಬ್ಬ ಹೊರತು ಉಳಿದವರೆಲ್ಲ ದೇಶದ್ರೋಹಿಗಳೆಂದು ಕೊಲ್ಲಲ್ಪಟ್ಟರು. ಕಮ್ಯುನಿಸ್ಟರು ವರ್ಗರಹಿತ ಸಮಾಜವನ್ನು ಕಟ್ಟಿದರೂ ಕಟ್ಟಬಹುದು. ಆದರೆ ನೀತಿ ದಯೆ [illegible]ಗಳನ್ನು ತೊಡೆದು ಹಾಕಿದ ಅವರ ಸಮಾಜದಲ್ಲಿ ಮಾನವತೆಗೆ ಎಡೆಯಿಲ್ಲವೆಂಬದು ಸ್ಪಷ್ಟವಾಗಿದೆ.

# ಕರ್ನಾಟಕ

### ಧಾರವಾಡ

ಹವಾನಾ ಪರಿಷತ್ತಿಗೆ ಹಿಂದೀ ಶಿಷ್ಟಮಂಡಳದ ಸದಸ್ಯರಾಗಿ ಹೋಗಿದ್ದ ಶ್ರೀ ದ. ಪ. ಕರಮರಕರರು ೨೮ ನೇ ತಾರೀಕು ಮರಳಿ ಧಾರವಾಡಕ್ಕೆ ಬಂದರು. ಧಾರವಾಡ ಸ್ಟೇಶನದಲ್ಲಿ ಅವರ ಅನೇಕ ಅಪ್ತೇಷ್ಟ ಮಿತ್ರರು ಸ್ವಾಗತವನ್ನಿತ್ತರು.

ಧಾರವಾಡ ಜಿಲ್ಲಾ ಗಾಂಧಿ ರಾಷ್ಟ್ರೀಯ ಸ್ಮಾರಕ ನಿಧಿಗೆ ಜೂನ ೧೯ ರಿಂದ ೨೫ ರ ವರೆಗೆ ೧೮೦೪೯-೫-೩ ವಸೂಲ ಬಂದಿದೆ. ಈ ವರೆಗೆ ಒಟ್ಟು ೧೧೪೫೩-೧೩-೧ ನಿಧಿ ಕೂಡಿದಂತಾಗಿದೆ.

ಧಾರವಾಡದಲ್ಲಿ ಹಿಂದುಸ್ತಾನೀ ಶಿಕ್ಷಕ ವಿದ್ಯಾಲಯದ ಉದ್ಘಾಟನ ಸಮಾರಂಭವು ೨೮ ನೇ ತಾರೀಕು ಮುಂಜಾನೆ ೧೧|| ಗಂಟೆಗೆ ಶ್ರೀ ಕರಮರಕರರ ಅಧ್ಯಕ್ಷತೆಯಲ್ಲಿ ಶ್ರೀಧೀರೇಂದ್ರ ಭಾಯಿ ಮುಜುಮದಾರ, ಚರಕಾ ಸಂಘದ ಅಧ್ಯಕ್ಷರು, ಇವರಿಂದ ಜರುಗಿತು.

ಬಂಗಲೆ ಕಂಪೌಂಡಗಳಲ್ಲಿ ಹಾಗು ಹಿತ್ತಲಗಳಲ್ಲಿ ಬಟಾಟ ಬೆಳೆಯಲಿಚ್ಛಿಸುವವರಿಗೆ ಬಟಾಟ ಬೀಜಗಳನ್ನು ಚಿಲ್ಲರೆ ಮಾರಲು ನಿರ್ಧರಿಸಿ ಒಂದು ಮಣದ ವರೆಗೆ ಬೀಜ ಕೊಡಲಾಗುವದು. ಮಣಕ್ಕೆ ೭-೪-೦ ದರವಿದ್ದು ಈ ಬೀಜಗಳನ್ನು ಧಾರವಾಡ ಒಕ್ಕಲತನದ ಕಾಮಗಾರರಿಂದ ಪಡೆಯಬಹುದೆಂದು ಪ್ರಕಟಿಸಲಾಗಿದೆ.

ಮುಂಬಯಿ ಸರಕಾರದ ಅರ್ಥಸಚಿವರಾದ ಮಾನ್ಯ ವೈಕುಂಠಲಾಲ ಮೆಹತಾ ಇವರು ಅಕ್ಕೂರ ಸಹಕಾರೀ ನೀರಾವರಿ ಕೇಂದ್ರವನ್ನು ಉದ್ಘಾಟಿಸಲು ಬಂದಿದ್ದರು. ಅಗ ಹುಲಕೋಟಿ ಸಹಕಾರೀ ಶಿಕ್ಷಣದ ಸಂಘದ ಬೆಳ್ಳಿಹಬ್ಬದಲ್ಲಿ ಭಾಷಣ ಮಾಡಿದರು. ಹೊಸರಿತ್ತಿ ಗಾಂಧೀ ಆಶ್ರಮದಲ್ಲಿ ಭಾಷಣ ಮಾಡಿದರಲ್ಲದೆ ಇನ್ನೂ ಹಲವು ಕಾರ್ಯಕಲಾಪಗಳಲ್ಲಿ ಭಾಗವಹಿಸಿದರು.

### ಬೆಳಗಾವಿ

ಮುಂಬಯಿ ಮುಖ್ಯಮಂತ್ರಿಗಳಾದ ಮಾನ್ಯ ಬಾಳಾಸಾಹೇಬ ಖೇರರು ಬೆಳಗಾವಿಯಲ್ಲಿ ರಾಣೀ ಪಾರ್ವತೀಬಾಯಿ ಕಾಲೇಜಿನ ಪ್ರಾರಂಭೋತ್ಸವವನ್ನು ೨೬ ಕ್ಕೆ ಜರುಗಿಸಿದರು. ಕೆಳಗಿನ ತರಗತಿಗಳ ಶಿಕ್ಷಣದ ಮಟ್ಟವನ್ನು ಹೆಚ್ಚಿಸುವವರೆಗೆ ಉಚ್ಚ ಶಿಕ್ಷಣದ ಸುಧಾರಣೆ ಶಕ್ಯವಿಲ್ಲೆಂದು ಅವರು ಹೇಳಿದರು.

ಕಾಂಗ್ರೆಸ ಕಾರ್ಯಕರ್ತರ ಸಭೆಯಲ್ಲಿ ಅವರು ಮಾತಾಡುತ್ತ ಕರ್ನಾಟಕಸ್ಥರು ತಮ್ಮ ವಿವಿಧ ಬೇಡಿಕೆಗಳಿಗಾಗಿ ಮಾಡುತಿರುವ ಟೀಕೆಗಳನ್ನು ವಿವರಿಸಿ ತಮ್ಮನ್ನು ಟೀಕಿಸುವ ಕರ್ನಾಟಕಿಗಳಿಗಿಂತ ತಾವೇ ಹೆಚ್ಚಿನ ಕರ್ನಾಟಕಿಗಳೆಂದು ಮುಂತಾಗಿ ಹೇಳಿದರು.

ಮಿರಜಿ ನಗರ ಸಭೆಗೆ ಶ್ರೀ ಎಸ್. ವಿ. ಉರ್ಫ ಭಾವೂಸಾಹೇಬ ಕರಮರಕರರು ಅಧ್ಯಕ್ಷರಾಗಿ ಆರಿಸಲ್ಪಟ್ಟರು. ಪ್ರತಿಸ್ಪರ್ಧಿಗಳಾಗಿದ್ದ ಶ್ರೀ ಎಸ್ ಜಿ ಕೋರೆಯವರಿಗೆ ೩ ಮತಗಳು ಕಡಿಮೆ ಬಿದ್ದವು. ಪ್ರಾರಂಭದಲ್ಲಿ ಗವರ್ನರ ಜನರಲ್‌ರಾಗಿ ನೇಮಿಸಲ್ಪಟ್ಟ ರಾಜಾಜಿಯವರನ್ನು ಅಭಿನಂದಿಸುವ ಗೊತ್ತುವಳಿಯಾಯಿತು.

### ವಿಜಾಪುರ

ಬಿಜ್ಜರಗಿಯಲ್ಲಿ ೨೮ ನೇ ತಾರೀಕು ರಾತ್ರಿ ೮ ಗಂಟೆಗೆ ಶಸ್ತ್ರಾಸ್ತ್ರಸನ್ನದ್ಧ ದರೋಡೆಗಾರರ ಗುಂಪು ಶ್ರೀ ಅಣ್ಣಪ್ಪಾ ಲೋಣಿ ಇವರ ಮನೆಯನ್ನು ಮುತ್ತಿ ಬಂಗಾರದ ಅಭರಣಗಳನ್ನು ಲೂಟಿ ಮಾಡಿದರು. ಹಳ್ಳಿಯ ಜನರು ಇದನ್ನು ತೀವ್ರವಾಗಿ ವಿರೋಧಿಸಿದರು. ನಡೆದ ಹೋರಾಟದಲ್ಲಿ ದರೋಡೆಗಾರನೊಬ್ಬನು ಸತ್ತಿದ್ದು ಇಬ್ಬರು ಗಾಯಗೊಂಡರು. ಅವರ ಶಸ್ತ್ರಾಸ್ತ್ರಗಳನ್ನು ಕಸಿದುಕೊಳ್ಳಲಾಗಿದೆ. ಉಳಿದ ದರೋಡೆಗಾರರು ಹಿಂಬಾಗಿಲಿನಿಂದ ಓಡಿಹೋದರು. ಹಳ್ಳಿಗರಲ್ಲಿ ಒಬ್ಬನು ಸತ್ತನೆಂದು ತಿಳಿಯುತ್ತದೆ. ಗಾಯಾಳುಗಳನ್ನು ವಿಜಾಪುರ ಅಸ್ಪತ್ರೆಗೆ ತರಲಾಗಿದೆ.

ಹೈದರಾಬಾದ ಗಡಿ ಸೀಮೆಯಲ್ಲಿರುವ ಗಲಭೆ ಮೂಲಕ ಬಾಗಿಲಕೋಟೆಗೆ ಬಂದು ತಳವೂರಿದ ಪಂಜಾಬ ರೆಜಿಮೆಂಟ ಬ್ಯಾಟಲಿಯನ್‌ದವರು ಸಾರ್ವಜನಿಕರಿಗಾಗಿ ಸಕ್ರಿ ಹಾಯಸ್ಕೂಲ ಕ್ರೀಡಾಂಗಣದಲ್ಲಿ ಪರೇಡ ಮಾಡಿ ತೋರಿಸಿದರು.

### ಬೆಂಗಳೂರು — ಮೈಸೂರು

ಮೈಸೂರ ಮಹಾರಾಜರು ಮೈಸೂರು ನಗರದ ಪರಿಶೀಲನ ಕಾರ್ಯವನ್ನು ೨೭ ನೇ ತಾರೀಕಿನ ದಿನ ನಡೆಸಿದರು. ಸುಮಾರು ೫೦ ಸ್ಥಳಗಳಲ್ಲಿ ಅವರಿಗೆ ಸ್ವಾಗತವೀಯಲಾಯಿತು. ಜನರು ತಮ್ಮ ಅಡಚಣಿಗಳನ್ನು ಮಹಾರಾಜರ ಮುಂದಿಟ್ಟರು. ನೀರಿನ ಸೌಕರ್ಯ ಮಲೇರಿಯಾ ನಿವಾರಣೆ, ನಗರ ನೈರ್ಮಲ್ಯ ಮಕ್ಕಳಿಗೆ ವಿಹಾರ ಸ್ಥಾನ, ಪ್ರಯಾಣ ಸೌಕರ್ಯ ಮೊದಲಾದವುಗಳ ಬಗ್ಗೆ ಕೇಳಿಕೊಂಡರು. ಅರಮನೆ ದೇವಸ್ಥಾನಗಳಲ್ಲಿ ತಮಗೆ ಪ್ರವೇಶವಿರಬೇಕೆಂದೂ ನಾಡಹಬ್ಬದಲ್ಲಿ ಹರಿಜನ ಕುಸ್ತಿಗಳನ್ನು ಏರ್ಪಡಿಸಬೇಕೆಂದೂ ಹರಿಜನರು ಕೇಳಿಕೊಂಡರು.

### ದಕ್ಷಿಣ ಕನ್ನಡ

ಹದಿನಾಲ್ಕನೇ ಶತಮಾನದಲ್ಲಿ ದ್ವೈತಮತಾನುಸಾರವಾಗಿ ಶ್ರೀ ಭಾಗವತಕ್ಕೆ ಟೀಕೆ ಬರೆದು ಪ್ರಸಿದ್ಧರಾಗಿರುವ ಶ್ರೀ ವಿಜಯ ಧ್ವಜತೀರ್ಥರ ವಿಷಯವನ್ನು ತಿಳಿದುಕೊಳ್ಳಬೇಕಾದುದು ಅವಶ್ಯವಾಗಿದ್ದು ಅದನ್ನು ಪ್ರಸಿದ್ಧ ಮಾಡಬೇಕೆಂದು ಬಗೆಯಲಾಗಿದೆ. ಅದುದರಿಂದ ಅವರ ಬಗ್ಗೆ ಗೊತ್ತಿದ್ದವರೆಲ್ಲ, ತಮ್ಮ ವಿಳಾಸಕ್ಕೆ ತಿಳಿಸಬೇಕೆಂದು ಶ್ರೀ. ಕೆ. ವೆಂಕಟರಾಮಾಚಾರ್ಯ, ಮಾಸ್ತರ, ಸುರತ್ಕಲ್ ಇವರು ಬಿನ್ನವಿಸುತ್ತಾರೆ.

ಬೋಳಾರ ಕಮ್ಯುನಿಷ್ಟ ಪಕ್ಷಕ್ಕೆ ಸೇರಿರಬಹುದಾದೊಂದು ರೇಡಿಯೋ ಸೆಟ್ಟನ್ನು ಸಂತೆಯದ ಮೇಲೆ ತೆಗೆದುಕೊಂಡು ಹೋಗಿದ್ದು ಅದರೊಡನೆ ಮುಳಿಹಿತ್ಲು ಸ್ಟೆನ್ಲಿ ರೋಡ್ರಿಗ್ಸ ಎಂಬಾತನನ್ನು ದಸ್ತಗಿರಿ ಮಾಡಲಾಗಿದೆ. ೧೫ ದಿನಗಳ ವರೆಗೆ ಅವರನ್ನು ರಿಮಾಂಡ ಮೇಲೆ ಇಡಲಾಗಿದೆ.

ಸರಕಾರದ ವಾರಂಟು ಇದ್ದು ತಲೆ ತಪ್ಪಿಸಿಕೊಂಡು ತಿರುಗುತಿದ್ದ ಕಮ್ಯುನಿಸ್ಟ ಲಿಂಗಪ್ಪ ಸುವರ್ಣರನ್ನು ಹಿಡಿದು ಬೇರೆ ಬೇರೆ ಆರೋಪಗಳಿಗಾಗಿ ಶಿಕ್ಷೆ ವಿಧಿಸಲಾಯಿತು.

ಕುಂದಾಪೂರ ತಾಲೂಕ ಆಯುರ್ವೇದ ವೈದ್ಯರ ಪ್ರಥಮ ಸಮ್ಮೇಲನ ಶ್ರೀ ಕೆ. ವಿ. ಕೆ. ನಂಬಿಯಾರರ ಅಧ್ಯಕ್ಷತೆಯಲ್ಲಿ ೨೦ ತಾ ಬಸರೂರಲ್ಲಿ ಸಾಂಗವಾಯಿತು. ಆಯುರ್ವೇದ ವೈದ್ಯದ ಪುರಸ್ಕಾರ ಸಂಬಂಧದಲ್ಲಿ ಕೆಲ ಗೊತ್ತುವಳಿಗಳು ಪಾಸಾದವು. ಕಾರ್ಯಕಾರೀ ಮಂಡಳವೊಂದೂ ನೇಮಿಸಲ್ಪಟ್ಟಿತು.

## ಸರಸ್ವತಿ ಮಾಸಪತ್ರಿಕೆಯ ಬೆಳ್ಳಿ ಹಬ್ಬ

### ಆರ್. ಕಲ್ಯಾಣಮ್ಮನವರಿಗೆ ಸನ್ಮಾನ

#### ಮಹಾಜನಗಳಲ್ಲಿ ಪ್ರಾರ್ಥನೆ

ಸುಮಾರು ೨೬ ವರ್ಷದಿಂದ ಕನ್ನಡ ನಾಡಿನ ಮಹಿಳೆಯರಲ್ಲಿ ಮತ್ತು 'ಮಕ್ಕಳಲ್ಲಿ ನವಜಾಗ್ರತಿಯನ್ನುಂಟುಮಾಡಿ ಕನ್ನಡ ಸಾಹಿತ್ಯ ಪ್ರಪಂಚದಲ್ಲಿ ಅತ್ಯಮೋಘ ಸೇವೆ ಸಲ್ಲಿಸಿದ 'ಸರಸ್ವತಿ' ಮಾಸಪತ್ರಿಕೆಗೆ ಇಪ್ಪತ್ತರಲ್ಲಿ ಬೆಳ್ಳಿ ಹಬ್ಬವು ಜರುಲಿಗದೆ. ಆ ಶುಭ ಸಮಯದಲ್ಲಿ ಆ ಹಬ್ಬದ ಸವಿನೆನಪಿಗಾಗಿ ಕಾಲು ಶತಮಾನದಿಂದ ದಕ್ಷತೆಯಿಂದ 'ಸರಸ್ವತಿ' ಯನ್ನು ಮುನ್ನಡೆಸಿದ ಶ್ರೀಮತಿ ಆರ್. ಕಲ್ಯಾಣಮ್ಮನವರಿಗೆ ಸತ್ಕಾರ ಮಾಡುವ ಉದ್ದೇಶದಿಂದ ಬೆಂಗಳೂರಿನ ಮಾನ್ಯ ಹಿರಿಯರನೇಕರು ಮುಂದೆ ಬಂದು ಒಂದು ಸತ್ಕಾರ ಸಮಿತಿಯನ್ನು ರಚಿಸಿ ಆ ಮೂಲಕ ನಾಡ ಹಿರಿಕಿರಿಯರೆಲ್ಲರ ಸಹಾಯವನ್ನು ಕೋರಿರುವುದು ಎಲ್ಲರಿಗೂ ತಿಳಿದ ವಿಷಯವೇ ಆಗಿದೆ. ಆದರೆ ಇವರು ಮಾಡುವ ಸನ್ಮಾನವು ಸಂಪೂರ್ಣವಾಗಿ — ಕನ್ನಡ ಮಹಿಳೆಯರಲ್ಲಿ ನವ ಚೈತನ್ಯವನ್ನುಂಟುಮಾಡಿ ಅವರಲ್ಲಡಕವಾಗಿರುವ ಶಕ್ತಿಯು ಹೊರ ಹೊಮ್ಮುವಂತೆ ಮಾಡಿ ಸಾಹಿತ್ಯದರಿವನ್ನುಂಟುಮಾಡಿದ 'ಸರಸ್ವತಿ'ಗೆಂದರೆ ಅತಿಶಯೋಕ್ತಿಯಾಗಲಾರದು.

ಕನ್ನಡ 'ಸರಸ್ವತಿ'ಗೆ ನಾಡಿನ ಬಂಧು ಭಗಿನಿಯರೆಲ್ಲರೂ ಒಂದೊಂದು ಹೂವನ್ನಾದರೂ ಅರ್ಪಿಸಿ ಒಂದು ಮಾಲೆಯನ್ನು ಹಾಕಬೇಕೆಂಬುದೇ ನನ್ನ ಮನವಿ. ನಾಡಿನ ಹಿರಿಕಿರಿಯರೆಲ್ಲರ ತುಂಬು ನೆರವಿನಿಂದ 'ಸರಸ್ವತಿ'ಯು ತನ್ನದೇ ಆದ ಹಿರಿಯ ವೈಶಿಷ್ಟ್ಯದಿಂದ ಕನ್ನಡ ನಾಡಿನಲ್ಲಿ ಬೆಳಗಿ ಬೇಗನೆ 'ಸುವರ್ಣ ಮಹೋತ್ಸವ'ವನ್ನು ಪಡೆಯಲಿ ಎಂದು ತಿರುಗಾವಲಿನ 'ಕನ್ನಡ ಕಂದ'ರು ಬಿನ್ನವಿಸುತ್ತಾರೆ.

## ಅಹಿಂಸೆಯಿಂದಲೆ ವರ್ಗರಹಿತಸಮಾಜ ಸಾಧ್ಯ

### ವಿಧಾಯಕ ಕಾರ್ಯಕರ್ತರಿಗೆ ಶ್ರೀ. ಮುಜುಮದಾರರ ಕಿವಿಮಾತು

#### ಕರ್ನಾಟಕ ವಿಧಾಯಕ ಕಾರ್ಯಕರ್ತರ ಸಮ್ಮೇಲನದ ಕಾರ್ಯಕಲಾಪ

ಕರ್ನಾಟಕ ವಿಧಾಯಕ ಕಾರ್ಯಕರ್ತರ ಎರಡನೆ ಸಮ್ಮೇಲನ ಮೊನ್ನೆ ತಾ. ೨೭-೨೮ ಕ್ಕೆ ಹುಬ್ಬಳ್ಳಿಯ ಸಿದ್ಧಾರೂಢ ಮಠದಲ್ಲಿ ಜರಗಿತು. ಕರ್ನಾಟಕದ ಮೂಲೆಮೂಲೆಗಳಿಂದ ಸುಮಾರು ೩೦೦ ವಿಧಾಯಕ ಕಾರ್ಯಕರ್ತರು ಬಂದಿದ್ದರು. ಅ. ಭಾ. ಚರಕ ಸಂಘದ ಅಧ್ಯಕ್ಷ ಶ್ರೀ ಧೀರೇಂದ್ರ ಮುಜುಮದಾರರು ಅಧ್ಯಕ್ಷರಾಗಿದ್ದರು. ಶ್ರೀ ನಿಜಲಿಂಗಪ್ಪನವರು ಸಮ್ಮೇಲನವನ್ನು ಉದ್ಘಾಟಿಸಿದರು. ಅ. ಭಾ. ಚ. ಸಂಘದ ಕಾರ್ಯದರ್ಶಿ ಶ್ರೀ ಕೃಷ್ಣದಾಸ ಗಾಂಧಿ, ಮುಂಬಯಿ ಉಪಮಂತ್ರಿ ಶ್ರೀ ಕಂಠಿ, ಆಚಾರ್ಯ ಭಾಗವತ ಮೊದಲಾದ ಪ್ರಮುಖರು ವೇದಿಕೆಯ ಮೇಲೆ ವಿರಾಜಮಾನರಾಗಿದ್ದರು. ಶ್ರೀ ಕಿಶೋರಲಾಲ ಮಶ್ರುವಾಲಾ, ಶ್ರೀ ವಿನೋಬಾ ಭಾವೆಯವರೇ ಮೊದಲಾದವರ ಸಂದೇಶಗಳು ಬಂದಿದ್ದವು.

ಸ್ವಾಗತಾಧ್ಯಕ್ಷ ಶ್ರೀ ವೀರನಗೌಡ ಪಾಟೀಲರು ನಮ್ಮ ಎಲ್ಲ ಅನಿಷ್ಟಗಳ ಮೂಲ ನಮ್ಮ ಸಾಮಾಜಿಕ ವ್ಯವಸ್ಥೆಯಲ್ಲಿದೆಯೆಂದರು. ಪಟ್ಟಣದ ಮೋಹದಲ್ಲಿ ನಾವು ಸಿಕ್ಕಿಬಿದ್ದಿದ್ದೇವೆ. ಅದನ್ನು ತೊರೆದು ಸರಕಾರಿ ಸಹಾಯದ ಮುಖ ನೋಡದೆ ಆತ್ಮವಿಶ್ವಾಸ ಹಾಗು ಶ್ರದ್ಧೆಯಿಂದ ಹಳ್ಳಿಗಳು ಸ್ವಾವಲಂಬಿಯಾಗುವಂತೆ ನಾವೆಲ್ಲ ದುಡಿದರೆನೇ ನಿಜವಾದ ಸ್ವರಾಜ್ಯ ಬಂದಂತಾಗುವದು. ಪಕ್ಷ ಪಂಗಡಗಳನ್ನು ಕಟ್ಟಿಕೊಳ್ಳದೆ ತಾವು ಮಹಾತ್ಮರ ಆದೇಶದಂತೆ ನಡೆದು ಇದನ್ನು ಸಾಧಿಸಬೇಕೆಂಬುದು ಅವರ ಭಾಷಣದ ಸಾರವಾಗಿತ್ತು.

ಉದ್ಘಾಟಕ ಶ್ರೀ ನಿಜಲಿಂಗಪ್ಪನವರೂ ವಿಧಾಯಕ ಕಾರ್ಯಕರ್ತರು ಗುಂಪು ಕಟ್ಟಕೊಳ್ಳದೆ ಹಳ್ಳಿಗಳ ಪುನರುತ್ಥಾನಕ್ಕಾಗಿ ದುಡಿಯಬೇಕೆಂದರು.

ಶ್ರೀ ಮಶ್ರುವಾಲಾರವರು ತಮ್ಮ ಸಂದೇಶದಲ್ಲಿ ವೃಥಾ ತಾಲೂಕು, ಜಿಲ್ಲಾ, ಪ್ರಾಂತಿಕ ಪರಿಷತ್ತುಗಳಲ್ಲಿ ವೇಳೆ ಕಳೆಯದಂತೆ ಕಾರ್ಯಕರ್ತರನ್ನು ಎಚ್ಚರಿಸಿದ್ದರು. ಪ್ರತಿಯೊಬ್ಬ ಕಾರ್ಯಕರ್ತನೂ ತನ್ನ ಕಾಲಮೇಲೆ ತಾನು ನಿಲ್ಲಬೇಕೆಂದು ಅವರ ಸೂಚನೆಯಿತ್ತು.

### ಅಧ್ಯಕ್ಷರ ಭಾಷಣ

ಅಧ್ಯಕ್ಷ ಶ್ರೀ ಮುಜುಮದಾರರು ಹಿಂದಿಯಲ್ಲಿ ಮಾಡಿದ ಬೋಧಪ್ರದ ಭಾಷಣವನ್ನು ಶ್ರೀ ಕೆ. ವೆಂಕಟರಾಮಯ್ಯನವರು ಕನ್ನಡಕ್ಕೆ ಅನುವಾದಿಸಿದರು. ಅಧ್ಯಕ್ಷ ಭಾಷಣದ ಸಾರ ಹೀಗಿತ್ತು:

ದುರಾತ್ಮನು ಸತ್ತರೆ ಪ್ರೇತಾತ್ಮನಾಗಿ ಕಾಡುವನೆಂಬಂತೆ ಬ್ರಿಟಿಶರಿಂದು ಹೋಗಿದ್ದರೂ ಅವರು ಸಿದ್ಧಮಾಡಿಟ್ಟ ಅನೇಕ ಸಮಸ್ಯೆಗಳು ನಮ್ಮನ್ನು ಕಾಡುತ್ತಿವೆ. ನಮ್ಮ ಮೇಲೆ ಹಿಡಿತವಿಟ್ಟುಕೊಳ್ಳಲು ಅವರು ನಿರ್ಮಿಸಿದ ಜಾತೀಯತೆಯ ವಿಷ ಘೋರ ಫಲಗಳನ್ನು ಕೊಟ್ಟಿದೆ. ಗಾಂಧೀಜಿಯವರು ತಮ್ಮ ಪ್ರಾಣ ಕೊಟ್ಟು ಅದನ್ನೆದುರಿಸದಿದ್ದರೆ ನಮಗೆಂಥ ವಿಪತ್ತು ಬರುತಿತ್ತೊ! ಸಾಲದ್ದಕ್ಕೆ ಪ್ರಾಂತೀಯತೆಯೂ ಇದೆ. ಇದು ರಚನಾತ್ಮಕ ಕಾರ್ಯಕರ್ತರಲ್ಲಿಯೂ ಇರುವದು ನಾಚಿಕೆಗೇಡು. ಹೀಗಾದರೆ ರಚನಾತ್ಮಕದ ಬದಲು ನಾವು ವಚನಾತ್ಮಕ ಕಾರ್ಯಕರ್ತರೆನಿಸುವೆವು.

ಸದ್ಯದಲ್ಲಿ ಒದಗಿರುವ ಪೂರೈಕೆಯ ಕೊರತೆಯನ್ನು ಪ್ರಸ್ತಾವಿಸುತ್ತ ಅವರು ಔದ್ಯೋಗೀಕರಣದಿಂದ ಕೊರತೆಯನ್ನು ನೀಗಿಸುವ ಭ್ರಮೆ ಹಿಡಿದವರನ್ನು ಎಚ್ಚರಿಸಿದರು.

ಔದ್ಯೋಗೀಕರಣಕ್ಕೆ ಬೇಕಾಗುವ ಯಂತ್ರ ಸಾಮಗ್ರಿಗಳು ಬ್ರಿಟಿಶ ಬಂಡವಳಗಾರರ ಕೈಯಲ್ಲಿವೆ. ಅವರೂ ಹಿಂದೀ ಬಂಡವಳಗಾರರೂ ಅವರ ಹಿಂದಿನ ದಲಾಲರೂ ಸೇರಿ ರೈತನ ಕಿಸೆ ಕತ್ತರಿಸುವ ಹೂಟ ಹೂಡಿದ್ದಾರೆ. ಇದಕ್ಕೆ ಸ್ವಾರ್ಥಿ ರಾಜಕಾರಣಿಯೂ ಸೇರಿ ಚತುರ್ಭುಜ ರಾಕ್ಷಸನ ಅವತಾರವಾಗಿದೆ. ಋಷಿಯಿಂದ ಶ್ರೀಮಂತನ ವರೆಗೆ ಎಲ್ಲರೂ ಕಿಸಾನ ಜನತಾ ರಾಜ್ಯವೆನ್ನುತ್ತಾರೆ. ಇದು ಬೂಟಾಟಿಕೆ. ಅಧಿಕಾರ ಸಂಪಾದನೆಗಾಗಿ ನಡೆದ ಕಪಟ. ವರ್ಗ ರಹಿತ ಸಮಾಜ ಸ್ಥಾಪನೆಯಾಗಬೇಕು ನಿಜ. ಆದರೆ ಪಾಶ್ಚಿಮಾತ್ಯರ ಹಿಂಸಾತ್ಮಕ ಮಾರ್ಗದಿಂದ ಇದು ಸಾಧ್ಯವಿಲ್ಲೆಂದು ಈಗಾಗಲೆ ಸಿದ್ಧವಾಗಿದೆ. ಶ್ರೀಮಂತ ದರಿದ್ರರಿಬ್ಬರನ್ನೂ ಸಮರಸಗೊಳಿಸುವದೇ ವರ್ಗರಹಿತ ಸಮಾಜ ಸ್ಥಾಪನೆಯ ಉಪಾಯ. ಅದಕ್ಕೆ ಮಹಾತ್ಮಾ ಗಾಂಧಿಯವರ ಅಹಿಂಸಾ ಮಾರ್ಗವೇ ಮಾರ್ಗ

ಬ್ರಿಟಿಶರು ಸಿಂಹಾಸನದಿಂದ ಇಳಿಸಲ್ಪಟ್ಟಿದ್ದರೂ ಆ ಸಿಂಹಾಸನದತ್ತ ನೋಡುವ ಚಾಳಿ ಜನರಿಗಿನ್ನೂ ಹೋಗಿಲ್ಲ. ಇಂದು ನಮ್ಮವರೇ ಅದನ್ನೇರಿದ್ದರೂ ಅದರ ಭಾರವೇನು ಕಡಿಮೆಯಾಗಿಲ್ಲ. ಅದು ಕಡಿಮೆಯಾಗಬೇಕಾದರೆ ಇಂಗ್ಲಂಡಿನಿಂದ ಭಾರತಕ್ಕೆ ಬಂದ ಸಿಂಹಾಸನ ಪ್ರತಿ ಹಳ್ಳಿಗೂ ಬರಬೇಕು. ಜನತೆಗೆ ನಾವು ಸ್ವಾವಲಂಬನದ ಪಾಠ ಕಲಿಸಬೇಕು. ಸಿಂಹಾಸನದ ಮೇಲೆ ಅವರು ಭರವಸೆ ಇಟ್ಟುಕೊಳ್ಳಬಾರದು. ಮಧ್ಯಮ ವರ್ಗದ ತರುಣರು ಇದಕ್ಕಾಗಿ ಕೆಳಗಿಳಿದು ರೈತರೊಡನೆ ಹೆಗಲಿಗೆ ಹೆಗಲು ಕೊಟ್ಟು ಕೆಲಸ ಮಾಡಬೇಕು. ಹಳ್ಳಿಗಳಲ್ಲೆ ನೆಲಸಿ ಸಿಂಹಾಸನ ಹಳ್ಳಿಗಳಿಗೆ ಬರುವಂತೆ ಮಾಡಲು ಹಳ್ಳಿಗರ ಮುಂದಾಳ್ತನ ವಹಿಸಬೇಕು.

### ಪ್ರಶ್ನೋತ್ತರ

ತಾ. ೨೭ ಸಂಜೆ ಶ್ರೀ. ಮುಜುಮದಾರರು ಅನೇಕ ಪ್ರಶ್ನೆಗಳಿಗೆ ಉತ್ತರವಿತ್ತರು. ನಮ್ಮದೇ ಸರಕಾರವಿದ್ದಾಗ ಬೇರೆ ವಿಧಾಯಕ ಕಾರ್ಯಸಂಸ್ಥೆಯೇಕೆಂಬ ಪ್ರಶ್ನೆಗೆ ಸಿಂಹಾಸನದ ಮೇಲೆ ಕುಳಿತವರು ಅದರ ಕೆಳಗಿರುವವರನ್ನು ಮುಕ್ತಮಾಡಲಾರರೆಂದು ಅವರು ಉತ್ತರಿಸಿದರು. ಅದಕ್ಕೆ ಬೇರೆಯವರೇ ಬೇಕಾಗುವರು. ಬುದ್ಧ ಧರ್ಮದ ಪ್ರಸಾರ ಅಶೋಕನ ಅಧಿಕಾರದಿಂದಾಗದೆ ಭಿಕ್ಷುಗಳ ಕಾರ್ಯದಿಂದಾಯಿತು. ಇನ್ನೊಂದು ಪ್ರಶ್ನೆಗೆ ಉತ್ತರ ಕೊಡುತ್ತ ಕಾಂಗ್ರೆಸ್ ಸಂಸ್ಥೆ ವಿಧಾಯಕ ಕಾರ್ಯ ಮಾಡಲಾರದೆಂದು ಅವರು ಹೇಳಿದರು. ಕಾಂಗ್ರೆಸ್ಸು ಮುಖ್ಯವಾಗಿ ಅಧಿಕಾರ ಸ್ಥಾನದ ಆಕ್ರಮಣಕ್ಕಾಗಿ ಇರುವ ಸಂಸ್ಥೆ ಅದು ಇದ್ದ ಶಕ್ತಿಯನ್ನು ಉಪಯೋಗಿಸಬಲ್ಲದಲ್ಲದೆ ಶಕ್ತಿಯನ್ನು ನಿರ್ಮಿಸಲಾರದು. ಅದಕ್ಕೆ ವಿಧಾಯಕ ಕಾರ್ಯಕರ್ತನೆ ಬೇಕು. ವಿಧಾಯಕ ಕಾರ್ಯಕರ್ತನು ಅಧಿಕಾರ ಸ್ಥಾನದಲ್ಲಿರಕೂಡದು ಅಧಿಕಾರ ಲಾಲಸೆ ಅವನಿಗೆ ಸರ್ವಥಾ ವರ್ಜ್ಯವಾಗಿರಬೇಕು ಅಧಿಕಾರ ಸ್ಥಾನದಲ್ಲಿದ್ದು ವರ್ಗರಹಿತ ಸಮಾಜದ ರಚನೆ ಮಾಡುವದೆಂದರೆ ತಾನು ಕುಳಿತ ಟೊಂಗೆಯನ್ನು ಕಡಿಯುವಂತೆ ಮೌಢ್ಯದ ಮಾತು. ಶ್ರೀ ಮುಜುಮದಾರರು ವರ್ಧಾ ಶಿಕ್ಷಣ ಯೋಜನೆಯ ಮಹತ್ವವನ್ನೊತ್ತಿ ಹೇಳಿ ವರ್ಗರಹಿತ ಸಮಾಜ ಕ್ರಾಂತಿಯ ಕೊನೆಯ ಹೆಜ್ಜೆ ಅದೆಂದರು.

ತಾ. ೨೮ ಕ್ಕೆ ಸಮ್ಮೇಲನದಲ್ಲಿ ಅನೇಕ ಮಹತ್ವದ ಗೊತ್ತುವಳಿಗಳು] ಸ್ವೀಕೃತವಾದವು. ಗಾಂಧೀಜಿಯ ನಿಧನದ ಬಗ್ಗೆ ದುಃಖ ವ್ಯಕ್ತ ಮಾಡುವದು, ಮಹಾತ್ಮರ ವಿಧಾಯಕ ಕಾರ್ಯಕ್ರಮದಿಂದಲೇ ವರ್ಗರಹಿತ ಸಮಾಜ ರಚನೆ ಸಾಧ್ಯವಿದೆಯಾಗಿ ಎಲ್ಲರೂ ಇದರಲ್ಲಿ ಅಂತಃಕರಣಪೂರ್ವಕ 'ದುಡಿಯಬೇಕೆನ್ನುವದು, ಕರ್ನಾಟಕದಲ್ಲಿ ನಡೆದ ಎಲ್ಲ ವಿಧಾಯಕ ಕಾರ್ಯಗಳಲ್ಲಿ ಸಮನ್ವಯವನ್ನುಂಟು ಮಾಡಲು ಒಂದು ವಿಧಾಯಕ ಕಾರ್ಯ ಮಂಡಲ ಸ್ಥಾಪಿಸಬೇಕೆಂಬುದು ಅವುಗಳಲ್ಲಿ ಮುಖ್ಯವಾಗಿವೆ.

ಪಾರ್ಲಮೆಂಟರೀ ಚಟುವಟಿಕೆಗಳಲ್ಲಿ ಕೈಹಾಕಿದವನೂ ವಿಧಾಯಕ ಕಾರ್ಯಕರ್ತನಾಗಬಹುದೆಂಬ ಶ್ರೀ ವೀರನಗೌಡರ ಸೂಚನೆಯ ಬಗ್ಗೆ ಸುದೀರ್ಘ ಚರ್ಚೆ ನಡೆಯಿತು. ಅಧ್ಯಕ್ಷರು ಅದಕ್ಕೆ ಮಹಾತ್ಮರ ಸಮ್ಮತಿಯಿರಲಿಲ್ಲವೆಂದರು.

ಆಚಾರ್ಯ ಭಾಗವತರ ಭಾಷಣದೊಂದಿಗೆ ಸಭೆ ಮುಗಿಯಿತು.

---

● ಯಲ್ಲಾಪುರ ತಾಲೂಕಿನ ಕೊಡಸಳ್ಳಿ ಗ್ರಾಮದಲ್ಲಿ ಪ್ರಾಥಮಿಕ ಶಾಲೆಯೊಂದನ್ನು ಸ್ಥಾಪಿಸಬೇಕೆಂದು ಗೊತ್ತಾಯಿತು. ಮತ್ತು ಶ್ರೀ ರಾಮಚಂದ್ರ ಗಣಪ ಭಟ್ಟರ ಅಧ್ಯಕ್ಷತೆಯಲ್ಲಿ ಒಂದು ಪಂಚಮಂಡಳವೂ ನಿಯಮಿಸಲ್ಪಟ್ಟಿತು. ಈ ಶಾಲೆಗೆ ಮನ್ನಣೆ ಕೊಡುವದಕ್ಕಾಗಿ ವಿದ್ಯಾಧಿಕಾರಿಗಳ ಕಡೆಗೆ ಮನವಿ ಮಾಡಿಕೊಳ್ಳಲಾಗಿದೆ.

● ಹೈದರಾಬಾದಕ್ಕೆ ಹೋಗಿ ಬಂದ ಅಹಮ್ಮದ ಜಾನ ಎಂಬವನನ್ನು ಪೋಲೀಸರು ೨೪ ಕ್ಕೆ ಬಂಧಿಸಿರುವರು. ಜಾತೀಯ ಗಲಭೆಗಳ ಕಾಲಕ್ಕೆ ಇವನು ವೆಂಕಟಸ್ವಾಮಿ ಎಂಬವನನ್ನು ಕೊಂದಿರುವರಂತೆ. ಅಹಮ್ಮದ ಜಾನನು ಹೈದರಾಬಾದಕ್ಕೆ ಹೋದಾಗ ಅಲ್ಲಿಯ ರಜಾಕಾರರ ಶಿಬಿರದಲ್ಲಿ ಶಿಕ್ಷಣಹೊಂದಿ ಬಂದಿರುವನಂತೆ.

# ಹಿಂದುಸ್ತಾನ

## ಮುಂಬಯಿ

ಲಾಟರಿ ಮತ್ತು ಪಣದ ಸ್ಪರ್ಧೆಯನ್ನು ನಿಯಂತ್ರಿಸುವ ಮತ್ತು ಕರ ಹೇರುವ ಮಸೂದೆಯೊಂದು ಮುಂಬಯಿ ಸರಕಾರದ ಗ್ಯಾಝೆಟ್ಟಿನಲ್ಲಿ ಪ್ರಸಿದ್ಧವಾಗಿದೆ. ಲಾಟರಿಗಳಿಗೆ ಲಾಯಸೆನ್ಸ ಕೊಡಲು ನಿರ್ದಿಷ್ಟ ಫೀ ತೆಗೆದುಕೊಳ್ಳಲಾಗುವದು. ಮತ್ತು ಕೆಲ ನಿಯಮ ಹಾಕಲಾಗುವದು. ಲಾಟರಿಗೆ ಬರಬೇಕಾದ ಹಣದ ಮೇಲೆ ನೂರಕ್ಕೆ ೧೨।। ಯಂತೆ ಕರ ಹೇರಲಾಗುವದು. ಹಣದ ಸ್ಪರ್ಧೆಗಳಿಗೆ ಬರುವ ಹಣದ ಮೇಲೆ ನೂರಕ್ಕೆ ೨೫ ಮಿಕ್ಕದಂತೆ ಕರ ಹೇರಲಾಗುವದು. ಸರಕಾರಕ್ಕೆ ಸರಿದೋರಿದರೆ ಎರಡರ ಮೇಲೂ ನೂರಕ್ಕೆ ೫೦ ರಂತೆ ಕರಹೇರಬಹುದು ಎಂದು ಮೊದಲಾಗಿ ಮಸೂದೆಯಲ್ಲಿ ಹೇಳಲಾಗಿದೆ.

ಅಹಮ್ಮದಾಬಾದ ರೇಲ್ವೆ ನಿಲ್ದಾಣದ ಪುನರ್ರಚನೆಗಾಗಿ ೮೫ ಲಕ್ಷ ರೂ. ಗಳ ಯೋಜನೆ ಸಿದ್ಧವಾಗಿದ್ದು ಅದನ್ನು ಕೇಂದ್ರಶಾಸನ ಸಭೆಯ ಸ್ಥಾಯೀ ಅರ್ಥಿಕ ಸಮಿತಿಯ ಎದುರು ಇಡಲಾಗುವದು. ಈ ಯೋಜನೆಯಂತೆ ೪ ಅಂತಸ್ತಿನ ಕಟ್ಟಡ ಕಟ್ಟಿಸಲಾಗುವದಲ್ಲದೆ ೩ ನೇ ತರಗತಿಯ ಪ್ರವಾಸಿಕರಿಗೆ ಸಹ ಇಳಕೊಳ್ಳಲು ಬೇರೆ ಬೇರೆ ಏರ್ಪಾಟು ಮಾಡಲಾಗುತ್ತದೆ.

ಜೂನ ೧೧ ರಿಂದ ಪ್ರಾರಂಭವಾದ ಸುರತ ಮುದ್ರಣ ಕೆಲಸಗಾರರ ಸಂಪು ತಾ ೨೪ ರಂದು ಕೊನೆಗಂಡಿತು. ಕೆಲಸಗಾರರೆಲ್ಲ ಅಂದು ಮುಂಜಾನೆ ಕೆಲಸಕ್ಕೆ ಹೋದರು. ೧೪ ದಿನಗಳ ವರೆಗೆ ಪ್ರಕಟವಾಗದಿದ್ದ ಸುರತ ಪತ್ರಿಕೆಗಳೆಲ್ಲ ತಾ ೨೪ ರ ಸಂಜೆ ಪ್ರಕಟವಾದವು.

ಬಾರ್ಸಿ ಲಾತೂರ ಲೈಟ ರೇಲ್ವೆಯ ರಾತ್ರಿ ಗಾಡಿಗಳ ಓಡಾಟವನ್ನು ಜೂನ ತಾ ೨೩ ರ ರಾತ್ರಿಯಿಂದ ನಿಲ್ಲಿಸಲಾಗಿದೆ. ಕಳೆದ ಕೆಲವು ದಿನಗಳಿಂದ ಈ ಭಾಗದಲ್ಲಿ ಓಡಾಡುವ ಗಾಡಿಗಳ ಮೇಲೆ ರಜಾಕಾರರು ಮತ್ತು ಸಶಸ್ತ್ರ ಅರಬರು ಅನೇಕ ಸಲ ದಾಳಿ ಮಾಡಿದ್ದರು.

ಸೊಲ್ಲಾಪುರದಿಂದ ೪೦ ಮೈಲು ದೂರದ ಗಡಿಯ ಕೆಸೇರ ಜವಳಗೆ ಎಂಬ ಹಳ್ಳಿಯ ಮೇಲೆ ೫೦ ಸಶಸ್ತ್ರ ರಜಾಕಾರರು ದಾಳಿ ಮಾಡಲು ಹಿಂದೀ ಸೈನಿಕರು ಪ್ರತಿಭಟಿಸಿದ್ದರ ಫಲವಾಗಿ ೪ ರಜಾಕಾರರು ಮಡಿದರೆಂದು ವರದಿ ಬಂದಿದೆ.

ಫಿಲ್ಮ, ಉಣ್ಣೆ, ಗಂಧಕ ಕಾಸ್ಟಿಕ ಸೋಡಾ ಮುಂತಾದವುಗಳಿಂದ ತುಂಬಿದ ಒಂದು ಅಮೇರಿಕನ್ ಹಡಗಕ್ಕೆ ತಾ ೨೩ ರಂದು ಒಮ್ಮೆಲೇ ಬೆಂಕಿ ಹತ್ತಿತು. ಅದನ್ನು ಆರಿಸಲು ಅಗ್ನಿಶಾಮಕ ನೌಕೆಗಳು ಸುಮಾರು ೧೬ ತಾಸು ಹೆಣಗಾಡಬೇಕಾಯಿತು. ಮಾಲಿನ ಬಹುಭಾಗ ಸುಟ್ಟು ಭಸ್ಮವಾಗಿದೆ ಎಂದು ಮೊದಲಾಗಿ ತಿಳಿಯುತ್ತದೆ.

ಪರಮಿಟ್ ಇಲ್ಲದೆ ಕರಾಚಿಗೆ ಬಟ್ಟೆ ಕಳಿಸಿದ ಬಗ್ಗೆ ೭೦ ಮುಸಲ್ಮಾನರನ್ನು ೨೪ ರಂದು ಮುಂಬಯಿಯಲ್ಲಿ ಬಂಧಿಸಲಾಗಿದೆ.

ಮಹಾತ್ಮಾ ಗಾಂಧಿಯವರ ಸ್ಥಳದಲ್ಲಿ ಸರದಾರ ವಲ್ಲಭಭಾಯಿ ಪಟೇಲರು ಕಸ್ತೂರಬಾ ಗಾಂಧಿ ರಾಷ್ಟ್ರೀಯ ಸ್ಮಾರಕ ನಿಧಿಯ ಅಧ್ಯಕ್ಷರಾಗಿ ಆಯ್ಕೆ ಹೊಂದಿದ್ದಾರೆ.

ಯರವಡಾ ಔದ್ಯೋಗಿಕ ಶಾಲೆಯ ಸುಪರಿಂಟೆಂಡೆಂಟರಾದ ಶ್ರೀ ಜಿ. ಎಸ್. ಹರ್ಷೆ ಅವರಿಗೆ ಅಮೇರಿಕೆಯ ಅನಾಥ ಮತ್ತು ರೋಗಪೀಡಿತ ಮಕ್ಕಳ ಆರೈಕೆ ಸಂಸ್ಥೆಯ ಕಾರ್ಯಕಲಾಪಗಳನ್ನು ಅಭ್ಯಸಿಸುವದಕ್ಕಾಗಿ ಯುಕ್ತರಾಷ್ಟ್ರ ಸಂಘದವರು ಒಂದು ಫೆಲೋಶಿಪ್ಪನ್ನು ಕೊಟ್ಟಿದ್ದಾರೆ.

ಅಹಮ್ಮದಾಬಾದದಿಂದ ೪೦ ಲಕ್ಷ ರೂ. ಬೆಲೆಯ ಬಟ್ಟೆಯ ೪ ಸಾವಿರ ಗಂಟುಗಳ ವಿಶೇಷ ಮಾಲಗಾಡಿಯೊಂದು ಜೂನ ೨೬ ರ ದಿನ ಪೂರ್ವ ಪಂಜಾಬಕ್ಕೆ ತೆರಳಿತೆಂದು ತಿಳಿಯುತ್ತದೆ.

ಬಾಡಿಗೆ ಮನೆಗಳ ನಿಯಂತ್ರಣಾಜ್ಞೆಯು ಅಸ್ತಿತ್ವದಲ್ಲಿ ಬಂದಂದಿನಿಂದ ಮುಂಬಯಿ ನಗರದಲ್ಲಿ ೩೮೦೮೫ ಜನರು ಮನೆ ಬಾಡಿಗೆಗೆ ಬೇಕೆಂದು ಅರ್ಜಿ ಮಾಡಿದ್ದಾರೆಂದೂ ನಗರದಲ್ಲಿ ೭೧೧೩ ಮನೆಗಳು ತೆರವಾಗಿದ್ದು ತಿಳಿದಿದೆಯೆಂದೂ ಬಹಳ ದಿನಗಳಿಂದ ತೆರವಿರುವ ರಾಜರ ಮತ್ತು ಕುಬೇರರ ಪ್ರಸಾದಗಳನ್ನು ವಶಪಡಿಸಿಕೊಳ್ಳುವ ಬಗ್ಗೆ ಸರಕಾರವು ವಿಚಾರಿಸುವದೆಂದೂ ಮಂತ್ರಿ ಎಲ್. ಎಂ. ಪಾಟೀಲರು ತಾ ೨೪ ರಂದು ಸುದ್ದಿಗಾರರ ಸಭೆಯಲ್ಲಿ ಹೇಳಿದರು.

## ಮದ್ರಾಸ

ನಂದ್ಯಾಳ ನಗರಸಭೆಯ ಹಿಂದಿನ ಅಧ್ಯಕ್ಷರಾದ ದಾದಾಖಾನ ಶೇರಾಣಿ ಮತ್ತು ಬೇರೆ ೬ ಜನ ಮುಸಲ್ಮಾನರನ್ನು ರಜಾಕಾರರಿಗೆ ಸಹಾಯ ಮಾಡುತ್ತಿದ್ದರೆಂಬುದು ತಿಳಿದು ಬಂದು ಅವರನ್ನು ಸೆರೆಹಿಡಿಯಲಾಗಿದೆ.

ತಾ. ೨೨ ಕ್ಕೆ ಬೆಜವಾಡಕ್ಕೆ ಬರುತ್ತಿದ್ದ ಹೆಂಗಸರು ಹುಡುಗರನ್ನೊಳಗೊಂಡ ೩೫ ಮಾರವಾಡಿ ಪ್ರಯಾಣಿಕರನ್ನು ರಜಾಕಾರರು ಮಧಿರಾ ಸ್ಟೇಶನ್ನಿನಲ್ಲಿ ( ನಿಜಾಂ ರೇಲ್ವೆ ) ತಡೆಹಿಡಿದು ಅವರಿಂದ ೩ ಲಕ್ಷ ರೂ. ಬೆಲೆಯ ಆಭರಣ ಮೊದಲಾದ್ದು ಸುಲಿದು ಮೈಮೇಲಿನ ಅರಿವೆ ಮಾತ್ರ ಬಿಟ್ಟಿದ್ದಾರೆಂದೂ ೨ ದಿನದ ನಂತರ ೩೩ ಜನರನ್ನು ಬಿಟ್ಟುಕೊಟ್ಟಿದ್ದಾರೆಂದೂ ಇನ್ನಿಬ್ಬರನ್ನು ಬಿಟ್ಟಿಲ್ಲವೆಂದೂ ತಿಳಿಯುತ್ತದೆ.

ಹೈದರಾಬಾದ ಪರಿಸ್ಥಿತಿಯ ಮೂಲಕ ಮಲಬಾರ ಪೋಲೀಸರು ತಮ್ಮ ಜಿಲ್ಹೆಯಲ್ಲಿರುವ ಹೈದರಾಬಾದ ಮುಸಲ್ಮಾನರನ್ನೆಲ್ಲ ಬಂಧಿಸಹತ್ತಿದ್ದಾರೆ. ಪಾಕಿಸ್ತಾನದಿಂದ ಹಿಂದಿರುಗಿ ಬಂದು ಮುಸ್ಲಿಂ ಲೀಗದ ಪ್ರಚಾರ ನಡೆಸಿದ ಟಿ. ಎ. ಹಸನ ಮೊದಲಾದ ೬ ಜನರನ್ನು ತಾ. ೨೩ ರಂದು ಬಂಧಿಸಲಾಯ್ತು. ಇದಲ್ಲದೆ ತಿರೂರು, ಮಂಚೇರಿ, ಕಾನಾನೂರ ಮೊದಲಾದ ಊರುಗಳಲ್ಲಿ ಕೂಡ ಒಟ್ಟು ೩೦ ಮುಸ್ಲಿಂ ಲೀಗ ಕಾರ್ಯಕರ್ತರನ್ನು ಬಂಧಿಸಲಾಗಿದೆ.

ನಿಜಾಮ ಸೈನಿಕರು ಹಿಂದೀ ಒಕ್ಕೂಟ ಪ್ರದೇಶವಾದ ಕೃಷ್ಣಾ ಜಿಲ್ಹೆಯ ಗಡಿಯ ಮೇಲೆ ದಿನಾಲು ದಾಳಿಮಾಡುತ್ತಿದ್ದಾರೆಂದು ಮದ್ರಾಸಕ್ಕೆ ಅಧಿಕೃತ ವರದಿಗಳು ಹೋಗಿವೆ. ಗಡಿಯಲ್ಲಿ ಎಲ್ಲ ಹಳ್ಳಿಗಳೂ ತೆರವಾಗಹತ್ತಿವೆ.

## ಹೊಸದಿಲ್ಲಿ

ಭಾರತದ ಆಡಳಿತ ಶಾಖೆಯಲ್ಲಿ ಮಹಿಳೆಯರನ್ನು ಕೆಲಸಕ್ಕೆ ಸೇರಿಸಿಕೊಳ್ಳಬೇಕೊ ಎಂಬುದನ್ನು ನಿರ್ಣಯಿಸಲಿಕ್ಕೆ ಒಂದು ವಿಶೇಷ ಮಂಡಲವನ್ನು ನೇಮಿಸಲಾಗಿತ್ತು. ಅವರು ಸೇರಿಸಿಕೊಳ್ಳಬಾರದೆಂದು ನಿರ್ಣಯ ಕೊಟ್ಟರು. ಇದನ್ನು ಕೇಂದ್ರದ ಆರೋಗ್ಯ ಮಂತ್ರಿ ರಾಜಕುಮಾರಿ ಅಮೃತಕುವರರು ಪ್ರತಿಭಟಿಸಿದ್ದರು. ಅಂತೂ ಈ ವಿಷಯ ಇನ್ನೂ ನಿರ್ಣಯಕ್ಕೆ ಬಂದಿಲ್ಲವೆಂದು ತಿಳಿಯುತ್ತದೆ.

ಕಾಶ್ಮೀರ ಸಮಿತಿಯು ಸಂಸ್ಥಾನಕ್ಕೆ ಬಂದಾಗ ಅದಕ್ಕೆ ಸ್ವಾಗತ ದೊರೆಯುವದಿಲ್ಲೆಂದೂ ಆಗ ಕಪ್ಪು ನಿಶಾನೆಯ ಪ್ರದರ್ಶನವಾಗಬಹುದೆಂದೂ ಶೇಖ ಅಬ್ದುಲ್ಲಾರು ಪಂ. ನೆಹರೂ ಅವರಿಗೆ ಸ್ಪಷ್ಟವಾಗಿ ಹೇಳಿರುವರೆಂದು ತಿಳಿಯುತ್ತದೆ.

ರಾಷ್ಟ್ರೀಯ ಸ್ವಯಂ ಸೇವಕ ಸಂಘದ ೫೧ ಕಾರ್ಯಕರ್ತರನ್ನು ಪೂ. ಪಂಜಾಬ ಸರಕಾರವು ತಾ. ೨೪ ರಂದು ಬಿಡುಗಡೆ ಮಾಡಿದ್ದು ಇನ್ನೂ ೧೦೫ ರಾ. ಸ್ವ. ಸೇವಕರು ಸ್ಥಾನಬದ್ಧತೆಯಲ್ಲಿ ಇರುವವಾಗಿ ತಿಳಿಯುತ್ತದೆ.

ಚೀನದ ಅಧ್ಯಕ್ಷರಾದ ಚಿಯಾಂಗ ಕೈಶೇಕರು ಗವರ್ನರ ಜನರಲ ರಾಜಗೋಪಾಲಾಚಾರ್ಯರಿಗೆ, “ನೀವು ನಿಮ್ಮ ಚಾರಿತ್ರ್ಯ ಮತ್ತು ಮುತ್ಸದ್ದಿತನದ ಬಲದಿಂದ ಸೌಹಾರ್ದದ ತಳಹದಿಯ ಮೇಲೆ ಹಿಂದುಸ್ತಾನವನ್ನು ಅಭಿವೃದ್ಧಿಗೊಳಿಸುವಿರೆಂದು ಆಶೆಯಿದೆ” ಎಂದು ಮೊದಲಾಗಿ ಶುಭ ಸಂದೇಶ ಕಳಿಸಿದ್ದಾರೆ.

ಔಂಧದ ಮಹಾರಾಜರ ಮಗ ಶ್ರೀ. ಅಪ್ಪಾಸಾಹೇಬರನ್ನು ಭಾರತ ಸರಕಾರದವರು ಆಗ್ನೇಯ ಆಫ್ರಿಕೆಯಲ್ಲಿ ಹಿಂದೀ ರಾಯಭಾರಿಗಳೆಂದು ನೇಮಿಸಿದ್ದಾರೆ.

ದಿಲ್ಲಿಯ ಮ್ಯಾಜಿಸ್ಟ್ರೇಟರಾದ ಪಿ. ಎಸ್. ಭಾನೋತರವರ ಕೋರ್ಟಿನಲ್ಲಿ ವಿಚಾರಣೆಗೆ ಬಂದ ೫ ಪ್ರಕರಣಗಳ ಕಾಗದ ಪತ್ರಗಳು ಮಾಯವಾಗಿರುವವು.

ಹಿಂದುಸ್ತಾನ ಸರಕಾರದ ಪರಿಹಾರ ಶಾಖೆಯವರು ಎಲ್ಲ ಪ್ರಾಂತಿಕ ಮುಖ್ಯ ಮಂತ್ರಿಗಳ ಮತ್ತು ಸಂಸ್ಥಾನಿ ಪ್ರತಿನಿಧಿಗಳ ಸಭೆಯೊಂದನ್ನು ಇದೇ ಜುಲೈ ೫ ನೇ ತಾ ಗೆ ದಿಲ್ಲಿಯಲ್ಲಿ ಕರೆದಿದ್ದಾರೆ. ಈಗ ದೇಶದ ಅನೇಕ ನಿರಾಶ್ರಿತ ಶಿಬಿರಗಳಲ್ಲಿದ್ದವರನ್ನು ಆದಷ್ಟು ಬೇಗನೆ ಕಾಯಂ ವಸತಿ ಸಂಸ್ಥೆಗಳಿಗೆ ಕಳಿಸುವ ಕುರಿತು ಚರ್ಚೆ ನಡೆಯಲಿದ್ದು ಈ ಬಗ್ಗೆ ಒಂದು ಯೋಜನೆಯನ್ನು ಸಿದ್ಧಪಡಿಸಲಾಗುವದು.

## ಕಾಶ್ಮೀರ ಹೈದರಾಬಾದ ಸಮಸ್ಯೆ

### ಪ್ರಾಗತಿಕರ ಅಭಿಪ್ರಾಯ

ಅ. ಭಾ. ಪ್ರಾಗತಿಕ ಮಹಾ ಮಂಡಲದ ಸಭೆ [illegible] ಜೂನ ತಾ ೨೭ ಕ್ಕೆ ಪುಣೆಯಲ್ಲಿ ಸೇರಿ ಕಾಶ್ಮೀರ ಹೈದರಾಬಾದಗಳ ಸಮಸ್ಯೆಯನ್ನು ಪರಿಶೀಲಿಸಿತು.

ಕಾಶ್ಮೀರದ ಬಗ್ಗೆ ತೀರ್ಮಾನಿಸಿದ ಗೊತ್ತುವಳಿಯಲ್ಲಿ ಪಾಕಿಸ್ತಾನವು ದಾಳಿಗಾರರಿಗೆ ತನ್ನ ಸೈನ್ಯ ಸಾಮಗ್ರಿಗಳ ಬೆಂಬಲಕೊಟ್ಟಿತಲ್ಲದೆ ದಾಳಿಗಾರರನ್ನು ಸಂಘಟಿಸಿತೆಂದೂ ಭದ್ರತಾ ಮಂಡಲವು ಕಾಶ್ಮೀರದ ವಿಷಯದಲ್ಲಿ ಸ್ವೀಕರಿಸಿದ ಗೊತ್ತುವಳಿಯಿಂದ ಹಿಂದುಸ್ತಾನಕ್ಕೆ ಅನ್ಯಾಯವಾಗಿದೆಯೆಂದೂ ಹೇಳಿದೆ.

ಹೈದರಾಬಾದದ ವಿಷಯವೂ ಸಭೆಯಲ್ಲಿ ಚರ್ಚಿತವಾಗಿ ಒಂದು ಗೊತ್ತುವಳಿಯಲ್ಲಿ ಹಿಂದುಗಳ ಹಾಗು ಹಿಂದುಸ್ತಾನದ ಹಳ್ಳಿಗಳ ಮೇಲೆ ನಡೆದ ರಜಾಕಾರರ ಅತ್ಯಾಚಾರವನ್ನು ಖಂಡಿಸಿ ಹಿಂದುಸ್ತಾನ ಸರಕಾರವು ಬೇಗ ಯೋಗ್ಯಕ್ರಮ ಕೈಕೊಳ್ಳಬೇಕೆಂದು ಸೂಚಿಸಲಾಗಿದೆ. ಒಡಂಬಡಿಕೆಯ ವಿಷಯದಲ್ಲಿ ಹಿಂದುಸ್ತಾನ ಸರಕಾರವು ಸೂಚಿಸಿದ ಕರಾರುಗಳು ತೀರ ಕನಿಷ್ಟ ಬೇಡಿಕೆಗಳಿದ್ದು ಅವನ್ನು ಹೈದರಾಬಾದವು ಮನ್ನಿಸಲೇಬೇಕು ಎಂದು ಆ ಗೊತ್ತುವಳಿಯಲ್ಲಿ ಸ್ಪಷ್ಟಪಡಿಸಲಾಗಿದೆ.

ಪ್ರಾಗತಿಕರು ಮೊದಲಿನಿಂದಲೂ ಅತ್ಯಂತ ಉದಾರ ಮತವಾದಿಗಳಾಗಿದ್ದು ಅವರು ಕೂಡ ಹೈದರಾಬಾದದ ಬಗ್ಗೆ ಕೂಡಲೆ ಕ್ರಮಕೈಕೊಳ್ಳಬೇಕೆಂದು ಸೂಚಿಸಿದ್ದಾರೆ.

---

## ಧಾನ್ಯನಾಶ ತಡೆಯಲು ಕೇಂದ್ರ ಸರಕಾರದ ಪ್ರಯತ್ನ

ದೇಶದ ಆಹಾರ ಧಾನ್ಯ ಹಾಳಾಗುವದನ್ನು ತಡೆಯಲು ಕೇಂದ್ರ ಆಹಾರ ಶಾಖೆಯವರು ಧಾನ್ಯವ್ಯಾಪಾರಿಗಳ ಮತ್ತು ಸಂಗ್ರಾಹಕರ ಸಭೆಯನ್ನು ದಿಲ್ಲಿಯಲ್ಲಿ ಕರೆದಿದ್ದಾರೆಂದು ತಿಳಿಯುತ್ತದೆ. ಆಹಾರ ಧಾನ್ಯಗಳು ಕೆಡದಂತೆ ಸಂಗ್ರಹಿಸುವ ಶಾಸ್ತ್ರೀಯ ವಿಧಾನವನ್ನು ಓರ್ವ ಸರಕಾರೀ ತಜ್ಞರು ಈ ಸಭೆಯಲ್ಲಿ ತಿಳಿಸಿಹೇಳುವರು. ಇಲಿ ಮತ್ತು ಹುಳಗಳಿಗೆ ಆಹುತಿಯಾಗಿ ಹಾಗು ಬಳುಸುಗಟ್ಟಿ ಪ್ರತಿವರ್ಷವೂ ದೇಶದಲ್ಲಿ ಸುಮಾರು ೩ ದಶಲಕ್ಷ ಟನ್ ಆಹಾರ ಧಾನ್ಯ ನಾಶವಾಗುತ್ತದೆಯೆಂದು ಅಧಿಕೃತವಾಗಿ ತಿಳಿದಿದೆ.

---

ಹಿಂದುಸ್ತಾನ ಪಾಕಿಸ್ತಾನಗಳು ವಿಮಾನಸಾರಿಗೆ ಒಪ್ಪಂದಕ್ಕೆ ಕರಾಚಿಯಲ್ಲಿ ತಾ ೨೩ ಕ್ಕೆ ಸಹಿ ಹಾಕಿದವೆಂದು ಪ್ರಕಟನೆ ಹೊರಟಿದೆ. ಹಿಂದುಸ್ತಾನ ಸರಕಾರದ ಪರವಾಗಿ ಪಾಕಿಸ್ತಾನದಲ್ಲಿ ಹಿಂದೀ ಹಾಯಕಮೀಶನರಾದ ಶ್ರೀ ಪ್ರಕಾಶರು ಒಪ್ಪಂದಕ್ಕೆ ಸಹಿ ಹಾಕಿದ್ದು ಪಾಕಿಸ್ತಾನದ ಸಂಪರ್ಕ ಮಂತ್ರಿ ಸರದಾರ ಅಬ್ದುಲ್ ರಾಬ ನಿಸ್ತಾರರು ಪಾಕಿಸ್ತಾನದ ಪರವಾಗಿ ಸಹಿ ಹಾಕಿದರು. ಈ ಒಪ್ಪಂದವು ೧೯೪೮ ರ ಜುಲೈ ೧ ರಿಂದ ಜಾರಿಯಲ್ಲಿ ಬಂದಿರುವದು.

## ಬಿಹಾರ

ಪಾಲಿಘಾಟ ರಾಜಕೀಯ ಪರಿಷತ್ತಿನ ಉದ್ಘಾಟನೆ ಮಾಡುತ್ತ ಬಿಹಾರದ ಪೂರೈಕೆ ಮಂತ್ರಿಗಳಾದ ಅನುಗ್ರಹನಾರಾಯಣಸಿಂಗರು, ಕಳ್ಳಪೇಟೆಗಾರರು ಹಾಗು ಲಾಭಬಡಕರು ಹಾದಿಗೆ ಬರದಿದ್ದರೆ ಅವರ ಅಂಗಡಿಗಳ ಮುಂದೆ ಸಾರ್ವಜನಿಕರು ಶಾಂತ ರೀತಿಯಿಂದ ಸತ್ಯಾಗ್ರಹ ಪ್ರಾರಂಭಿಸಬೇಕೆಂದು ಹೇಳಿದರು.

## ಹೈದರಾಬಾದ

ನಿಜಾಮ ಸರಕಾರದ ಮಿಲಿಟರಿ ಮತ್ತು ಪೋಲೀಸ ಅಧಿಕಾರಿಗಳು ವರ್ಹಾಡದ ಯವತಮಾಳ ಜಿಲ್ಹೆಯ ಗಡಿ ಹಳ್ಳಿಗಳಲ್ಲಿ ಬಂದು ಕಾರಸ್ಥಾನ ನಡಸಿದ್ದಾರೆಂದೂ ರಜಾಕಾರರು ಹಿಂದುಗಳ ಮೇಲೆ ಒಂದೇ ಸಮನಾಗಿ ಅತ್ಯಾಚಾರ ಮಾಡುತ್ತಿದ್ದಾರೆಂದೂ ವರದಿಗಳು ಬರುತ್ತಿವೆ. ರಜಾಕಾರ ಸಂಘವನ್ನು ಸೇರಲು ಒಬ್ಬ ಹರಿಜನರನ್ನು ನಿಜಾಂ ಪುಂಡರು ಒತ್ತಾಯಪಡಿಸಿ ಅವನು ಅದಕ್ಕೆ ಒಪ್ಪದ್ದರಿಂದ ಅವನನ್ನು ಗುಂಡಿಕ್ಕಿ ಕೊಂದರೆಂದು ತಿಳಿಯುತ್ತದೆ

ನಿಜಾಮ ಸರಕಾರದ ಆರೋಗ್ಯಶಾಖೆಯ ೨ ನೂರು ನೌಕರರು ಹೆಚ್ಚಿನ ಪಗಾರದ ಬೇಡಿಕೆ ಮುಂದಿಟ್ಟು ಜೂಲೈ ೫ ರಿಂದ ಸಂಪು ಹೂಡಿದ್ದಾರೆಂದು ತಿಳಿಯುತ್ತದೆ.

## ಕಾಲವಿಲಂಬ ಘಾತಕ

### ಹೈದರಾಬಾದದ ಬಗ್ಗೆ ಉಗ್ರಕ್ರಮ ಬೇಕು

### ಪಂ. ಕುಂಝುರೂರ ಸಲಹೆ

ಭಾರತ ಸೇವಕ ಸಮಾಜದ ಅಧ್ಯಕ್ಷರಾದ ಶ್ರೀ ಪಂಡಿತ ಹೃದಯನಾಥ ಕುಂಝುರು ಅವರು ಹೈದರಾಬಾದ ಸಂಸ್ಥಾನದ ಗಡಿಗೆ ಹೊಂದಿದ ಸೊಲ್ಲಾಪೂರ ಜಿಲ್ಹೆಯ ಹಳ್ಳಿಗಳ ಬವಣೆಯನ್ನು ಕಣ್ಣಾರೆನೋಡಬೇಕೆಂದು ಹೋಗಿದ್ದರು. ಅವರು ಈ ಬಗ್ಗೆ ತಾ ೨೮ ಕ್ಕೆ ಪುಣೆಯಲ್ಲಿ ತಮ್ಮ ಅಭಿಪ್ರಾಯವನ್ನು ಪತ್ರಿಕಾ ಪ್ರತಿನಿಧಿಗಳಿಗೆ ಹೇಳುತ್ತ, ಹಿಂದುಸ್ತಾನವು ಕಾಲವಿಲಂಬ ಧೋರಣವನ್ನು ಅನುಸರಿಸುವದು ಗಂಡಾಂತರದ್ದೆಂದೂ ಕೂಡಲೇ ಉಗ್ರಕ್ರಮ ಕೈಕೊಳ್ಳುವದು ಯುಕ್ತವೆಂದೂ ಅಭಿಪ್ರಾಯಪಟ್ಟರು ಮತ್ತು ಹೈದರಾಬಾದದ ಹಿಂದೂ ಸ್ತ್ರೀ ಪುರುಷರ ರಕ್ಷಣೆಯ ನೈತಿಕ ಹೊಣೆ ಹಿಂದುಸ್ತಾನ ಸರಕಾರದ ಮೇಲಿದೆ ಎಂಬುದನ್ನು ಎತ್ತಿ ತೋರಿಸಿದರು. ಅವರು ಮುಂದರಿಯುತ್ತ ಈ ಬಗ್ಗೆ ಇನ್ನೂ ಹೀಗೆ ಹೇಳಿದರು.

ಸೊಲ್ಲಾಪುರ ಜಿಲ್ಹೆಗೆ ಹೊಂದಿದ ಗಡಿಯ ಪರಿಸ್ಥಿತಿಯನ್ನು ಕಣ್ಣಾರೆಕಂಡಿದ್ದೇನೆ. ಈಗಾಗಲೇ ಸೊಲ್ಲಾಪುರದ ನಿರಾಶ್ರಿತ ಶಿಬಿರದಲ್ಲಿ ೭೦-೮೦ ಸಾವಿರ ಜನ ಬಂದಿದ್ದಾರೆ.

ರಜಾಕಾರರ ದಾಳಿಗೆ ನಿಜಾಮರ ಪೋಲೀಸರೂ ನೆರವಾಗುವರು.

### ಶಸ್ತ್ರಾಸ್ತ್ರ ಪೂರೈಸಿರಿ

ತಮಗೆ ಶಸ್ತ್ರಾಸ್ತ್ರ ಪೂರೈಸಿದರೆ ರಜಾಕಾರರ ಬೆನ್ನೆಲಬು ಮುರಿಯುವೆವೆಂದು ಗಡಿಯ ಜನರು ಧೈರ್ಯದಿಂದ ಹೇಳುತ್ತಿರುವರು. ಹಿಂದುಸ್ತಾನ ಸರಕಾರವು ಹಿಂದೀ ಸೈನಿಕರಿಗೆ ಬೆನ್ನಟ್ಟಿ ಹೊಡೆಯಲು ಅಜ್ಞೆ ಕೊಟ್ಟಿದ್ದರೂ ರಜಾಕಾರರು ದಾಳಿಮಾಡಿ ಹೋದ ನಂತರ ಹಿಂದೀ ಸೈನಿಕರಿಗೆ ಈ ಸುದ್ದಿ ತಿಳಿವುದರಿಂದ ಈ ಆಜ್ಞೆಯು ನಿಷ್ಪ್ರಯೋಜಕವಾಗಿದೆ. ನಿರಾಶ್ರಿತರು ಹೇಳುವ ಕರುಣ ಕತೆ ಕೇಳಿದರಂತೂ ಕರುಳಿಗೆ ಕೆಂಡವಿಟ್ಟಂತಾಗುವದು. ಅನೇಕರ ಮನೆ ಲೂಟಿ ಆಗಿವೆ, ಸುಟ್ಟಿವೆ. ಅನೇಕರ ಆಪ್ತೇಷ್ಟರ ಕೊಲೆಯಾಗಿದೆ, ಸ್ತ್ರೀ ಮಾನಭಂಗವಾಗಿದೆ. ಚಿಕ್ಕ ಮಕ್ಕಳನ್ನು ಹಿಡಿದು ಚಿತ್ರಹಿಂಸೆಗೆ ಗುರಿಮಾಡಿ ಆ ಮಕ್ಕಳ ತಾಯ್ತಂದೆಗಳಿಂದ ಹಣ ದೋಚುವದು ರಜಾಕಾರರ ನಿತ್ಯ ಧೋರಣವಾಗಿದೆ. ಹಿಂದೂ ಜನರ ಬಳಿಗಿದ್ದ ಬಂದೂಕುಗಳನ್ನು ಕಸಿದು ರಜಾಕಾರರಿಗೆ ಕೊಡಲಾಗಿದೆ. ಕಾಂಗ್ರೆಸ ಕೆಲಸಗಾರರ ಮೇಲಂತೂ ಕಾಕದೃಷ್ಟಿಯಿದ್ದು ಅವರನ್ನೂ ಅವರ ಆಪ್ತೇಷ್ಟರನ್ನೂ ಹೆಚ್ಚಿನ ಹಿಂಸೆಗೆ ಗುರಿ ಮಾಡಲಾಗುತ್ತಿದೆ. ಮುಲ್ಕೀ ಹಾಗು ಪೋಲೀಸ ಅಧಿಕಾರಿಗಳ ಕಣ್ಣೆದುರಿಗೇ ಹಿಂದುಗಳ ಅತ್ಯಾಚಾರವಾಗುತ್ತಿದ್ದರೂ ಅವರು ನಿಂತು ನೋಡುವರಲ್ಲದೆ ಅನ್ಯಾಯವನ್ನು ತಡೆಯುವದಿಲ್ಲ. ಹೀಗೆ ಒಂದೇ ಎರಡೇ ಅನೇಕ ಅನ್ಯಾಯದ ಕತೆಗಳಿವೆ. ಹೀಗಿರುವಾಗ ಹಿಂದುಸ್ತಾನ ಸರಕಾರವು ಕಾಲವಿಲಂಬ ಧೋರಣ ತಳೆದು ನಿಷ್ಕ್ರಿಯವಾಗಿ ಕುಳಿತುಕೊಳ್ಳುವದು ಯುಕ್ತವಲ್ಲ.

### ಹರಿಜನರಿಗೆ ಆಮಿಷ

ಸಂಸ್ಥಾನದ ಹರಿಜನರಿಗೆ ಕೆಲವೆಡೆ ಬೆದರಿಕೆ ಹಾಕಿ, ಕೆಲವೆಡೆ ಹಿಂದುಗಳು ಬಿಟ್ಟುಹೋದ ಹೊಲಮನೆಗಳನ್ನು ಹರಿಜನರಿಗೆ ಕೊಡುವದಾಗಿ ಆಮಿಷ ಹಚ್ಚಿ ಅವರು ರಜಾಕಾರರ ಪಡೆಯಲ್ಲಿ ಸೇರುವಂತೆ ಒತ್ತಾಯ ಪಡಿಸಲಾಗುತ್ತಿದೆ. ಕೆಲ ಹರಿಜನರಿಗಂತೂ ಮುಸಲ್ಮಾನ ಧರ್ಮ ಸ್ವೀಕರಿಸಲು ಹಚ್ಚಲಾಗಿದೆ. ಬೀದರ ಜಿಲ್ಹೆಯಲ್ಲಂತೂ ಪರಿಸ್ಥಿತಿ ತೀರ ಹದಗೆಟ್ಟಿದೆ. ತರುವಾಯ ಉಸ್ಮಾನಾಬಾದ ಜಿಲ್ಹೆಯೆನ್ನಬಹುದು.

### ಹಿಂದೂ ಜನರನ್ನು ಹತ್ತಿಕ್ಕುವ ಸಂಚು

ನನಗೆ ತಿಳಿದುಬಂದ ಸಂಗತಿಗಳ ಮೇಲಿಂದ ಹಿಂದೂ ಜನರನ್ನು ಭಯಭೀತರನ್ನಾಗಿ ಮಾಡಿ ಮುಸಲ್ಮಾನರ ನಿರಂಕುಶ ಅಧಿಕಾರಕ್ಕೆ ತಲೆಬಾಗಹಚ್ಚುವ ಬಗ್ಗೆ ಹಾಗೂ ಸಂಸ್ಥಾನ ಕಾಂಗ್ರೆಸಿನ ಹೊಣೆಗಾರ ಸರಕಾರದ ಬೇಡಿಕೆಯನ್ನು ನಾಮಶೇಷ ಮಾಡುವ ಬಗ್ಗೆ ಸುವ್ಯವಸ್ಥಿತವಾಗಿ ರಜಾಕಾರರ ಅತ್ಯಾಚಾರಗಳು ಸಾಗಿದ್ದು ಕಂಡುಬರುವದು. ಹೈದರಾಬಾದವು ಹಿಂದುಸ್ತಾನ ಸರಕಾರದ ಬಗ್ಗೆ ವೈರಭಾವ ತಾಳಿದ್ದೂ ಸುಸ್ಪಷ್ಟವಿದೆ. ಹೀಗೆಲ್ಲ ಇರುಹಾಗ ಕಾಲವಿಲಂಬ ಧೋರಣವನ್ನು ಹಿಂದುಸ್ತಾನ ಸರಕಾರವು ಅನುಸರಿಸುವದು ಘಾತಕವಲ್ಲದೆ ಮತ್ತೇನು ?

# ನಾರದ ಭವಿಷ್ಯ

ಜ್ಯೋತಿಷಿ—ಕೃಷ್ಣಶಾಸ್ತ್ರಿ ಭಿಡೆ, ಭವಿಷ್ಯಕಥನ ಆಫೀಸ ಖಡೇಬಝಾರ, ಬೆಳಗಾವಿ.

## ಜುಲೈ ೫ ರಿಂದ ೧೧ ರ ವರೆಗೆ

### ಮೇಷ

ನಿಮ್ಮ ಪ್ರಕೃತಿಯು ಬಗ್ಗೆ ಒಂದಿಲ್ಲೊಂದು ಬಗೆಯತಕರಾರು ಉಳಿದರೂ ಹೆಂಡತಿ ಮತ್ತು ಮಕ್ಕಳ ಪ್ರಕೃತಿ ಉತ್ತಮ ಉಳಿದು ಪ್ರಾಪಂಚಿಕ ಸುಖ ಚೆನ್ನಾಗಿ ದೊರೆವುದು. ಪ್ರಿಯ ಆಪ್ತರಲ್ಲಿ ಕೆಲ ಶುಭ ಸಂಗತಿಗಳು, ಮತ್ತು ಹಳೆಯ ಮಿತ್ರರ ಭೆಟ್ಟಿ ಸಹವಾಸ. ಉದ್ಯೋಗದಲ್ಲಿ ಪ್ರಗತಿ ಕಡಮೆ ಲಾಭ ಸಾಧಾರಣವೆ. ಆದರೆ ಪ್ರತಿಷ್ಠೆ ಬಹಳ ಹೆಚ್ಚು. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಒಳ್ಳೆ ಯಶಸ್ಸು ಮತ್ತು ಶತ್ರುಗಳಲ್ಲಿ ಕೆಲವರು ನಿಃಪಾತರಾಗುವರು. ಸ್ವಪ್ನ ಶುಭಸೂಚಕ ಮತ್ತು ಕ್ವಚಿತ್ ದೈವೀ ದೃಷ್ಟಾಂತವಾಗುವ ಸಂಭವ. ಸ್ಥಾವರದಲ್ಲಿ ಹೆಚ್ಚಳ. ಪ್ರವಾಸಕ್ಕಿಂತ ಭೆಟ್ಟಿ ಮತ್ತು ಪತ್ರವ್ಯವಹಾರ ಹೆಚ್ಚು ಅನುಕೂಲ. ಅಶ್ವಿನಿಯ ಕೊನೆಯ ೩ ಮತ್ತು ಭರಣಿಯ ೧ ನೇ ಚರಣಕ್ಕೆ ತೊಂದರೆ ಕಡಮೆ. ತಾ. ೫, ೬, ೭, ೧೦ ಅನುಕೂಲ.

### ವೃಷಭ

ನಿಮ್ಮ ಮತ್ತು ಹೆಂಡತಿಯ ಪ್ರಕೃತಿ ಅನುಕೂಲ. ಆದರೆ ಮಕ್ಕಳದು ಕಿಂಚಿತ್ ಕೆಡುವದು. ಉಳಿದ ವಿಷಯಗಳಲ್ಲಿ ಪ್ರಾಪಂಚಿಕ ಸುಖ ಉತ್ತಮ. ಆದರೆ ಕೆಲವೊಂದು ಅಗಂತುಕ ಅತಿಥಿಗಳಿಂದ ಸ್ವಲ್ಪ ಉಪದ್ರವ. ಸ್ಥಾವರ ಮತ್ತು ಜಂಗಮದಲ್ಲಿ ಸ್ವಲ್ಪ ಹೆಚ್ಚಳ. ಉದ್ಯೋಗದಲ್ಲಿ ಪ್ರತಿಷ್ಠೆ ಸಾಧಾರಣವೆ. ಆದರೆ ಪ್ರಗತಿ ಮತ್ತು ಲಾಭ ದೊಡ್ಡ ಪ್ರಮಾಣದಲ್ಲಿ. ಮಿತ್ರಸುಖ ಬಹಳ ಉತ್ತಮ. ಅತ್ಯಂತ ಸಾಹಸದ ಕೆಲಸಗಳಲ್ಲಿ ಅಸಂಭಾವ್ಯವಾದ ಯಶಸ್ಸು ಸಿಕ್ಕುವ ಯೋಗ. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ವೆಚ್ಚ ಮತ್ತು ತೊಂದರೆ ಬಹಳ. ಆದರೆ ಅನುಕೂಲತೆ ಬೇಕಾದಷ್ಟು. ವಿಶೇಷ ಬುದ್ಧಿಮತ್ತೆಯ ಕೆಲಸವನ್ನು ಆರಂಭಿಸುವ ಯೋಗ. ಭೆಟ್ಟಿಗಿಂತ ಪ್ರವಾಸ ಮತ್ತು ಪತ್ರವ್ಯವಹಾರ ಹೆಚ್ಚು ಅನುಕೂಲ. ರೋಹಿಣಿಯ ಕೊನೆಯ ೩ ಮತ್ತು ಮೃಗಾದ ೧ ನೇ ಚರಣಕ್ಕೆ ಹೆಚ್ಚು ಅನುಕೂಲ. ತಾ. ೫, ೬, ೭, ೮ ಅನುಕೂಲ.

### ಮಿಥುನ

ನಿಮ್ಮ ಮತ್ತು ಮಕ್ಕಳ ಪ್ರಕೃತಿ ಉತ್ತಮ. ಆದರೆ ಹೆಂಡತಿಗೆ ಮತ್ತು ಅತಿವೃದ್ಧ ಜನರಿಗೆ ಬಹಳ ಕ್ಲೇಶ. ಹೆಂಡತಿ ಮತ್ತು ಮಕ್ಕಳು ನಿಮ್ಮ ಗೂಡ ಬಹಳ ವಿರೋಧ ಕಟ್ಟುವರು. ಎಲ್ಲ ವಿಷಯಗಳಲ್ಲಿ ಪ್ರಾಪಂಚಿಕ ಸುಖದ ಕೊರತೆ. ಉದ್ಯೋಗದಲ್ಲಿ ಪ್ರಗತಿ ಮತ್ತು ಲಾಭ ಬಹಳ ಕಡಮೆ. ಆದರೆ ಧಂದೆಪವರಿಗಿಂತ ನೋಕರ ಜನರಿಗೆ ಪ್ರತಿಷ್ಠೆ ಹೆಚ್ಚು ಅನುಕೂಲ. ಆಗಬಾರದ ಕೆಲಸಗಳೂ ಆಗೇತೀರುವವೆಂಬ ಫಾಜೀಲ ಆತ್ಮವಿಶ್ವಾಸ. ಆದರೆ ಅಯುಕ್ತ ಸಮಯದಲ್ಲಿ ಕೈಕಾಲು ಕಳೆದುಕೊಳ್ಳುವ ಪ್ರಸಂಗ ಬರುವದರಿಂದ ಬಹಳ ಫಜೀತಿ. ಪ್ರವಾಸ ತೊಂದರೆಯದು. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಹಿಮ್ಮೆಟ್ಟುವದು. ಭೆಟ್ಟಿ ಮಧ್ಯಮ. ಆದರೆ ಪತ್ರವ್ಯವಹಾರ ಉತ್ತಮ. ಆರಿದ್ರೆಯ ಕೊನೆಯ ೩ ಮತ್ತು ಪುನರ್ವಸುವಿನ ಒಂದನೆ ಚರಣಕ್ಕೆ ತೊಂದರೆ ಕಡಮೆ. ತಾ. ೬, ೭, ೧೦ ಅನುಕೂಲ.

### ಕರ್ಕ

ಪ್ರಕೃತಿ ಎಲ್ಲರದೂ ಅನುಕೂಲ ಆದರೆ ನಿಮ್ಮನಿಮ್ಮಲ್ಲಿ ಮತಭೇದ ವಿಪರೀತ ಹೆಚ್ಚುವದರಿಂದ ಪ್ರಾಪಂಚಿಕ ಸುಖದ ಹ್ರಾಸವಾಗುತ್ತುವದು. ಸ್ಥಾವರ ಜಂಗಮ ಸಂಗ್ರಹದಲ್ಲಿ ಒಬ್ಬರೊಬ್ಬರ ಸ್ಪರ್ಧೆಯಿಂದ ಬಹಳ ಹಾನಿ. ಉದ್ಯೋಗದಲ್ಲಿ ಪ್ರಗತಿ ಉತ್ತಮ ಪ್ರತಿಷ್ಠೆ. ನೌಕರ ಜನರಿಗಿಂತ ಧಂದೆ ಮಾಡುವವರಿಗೆ ಹೆಚ್ಚು ಅನುಕೂಲ ಆದರೆ ಲಾಭ ಬಹಳ ಕಡಮೆ. ವಿಪರೀತ ಹೊಸ ಹೊಸ ವೆಚ್ಚಗಳಿಂದು ಮುಂದೆ ಬಂದು ನಿಲ್ಲುವ ಪ್ರಸಂಗ. ವಾಹನದಿಂದ ಪೀಡೆ. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಹಿಮ್ಮೆಟ್ಟುವದು. ಪತ್ರವ್ಯವಹಾರಕ್ಕಿಂತ ಭೆಟ್ಟಿ ಮತ್ತು ಪ್ರವಾಸ ಅನುಕೂಲ. ಪುಷ್ಯದ ಕೊನೆಯ ೩ ಮತ್ತು ಆಶ್ಲೇಷಾದ ೧ ನೇ ಚರಣಕ್ಕೆ ತೊಂದರೆ ಕಡಮೆ. ತಾ. ೫, ೯, ೧೧, ಅನುಕೂಲ.

### ಸಿಂಹ

ಪ್ರಕೃತಿ ಉತ್ತಮ ಹೆಂಡತಿಯದೂ ಸುಧಾರಿಸುವ ದಾರಿಯಲ್ಲಿ. ಕೆಲವೊಂದು ಕಿಟಿ ಕಿಟಿ ಉಳಿದರೂ ಪ್ರಾಪಂಚಿಕ ಸಮಾಧಾನ ಅನುಕೂಲ. ಉದ್ಯೋಗದಲ್ಲಿ ಪ್ರಗತಿ ಸಾಮಾನ್ಯವೆ ಆದರೆ ಪ್ರತಿಷ್ಠೆ ಮತ್ತು ಲಾಭ ಬಹಳ ಉತ್ತಮ ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ವೆಚ್ಚ ಮತ್ತು ತೊಂದರೆ ಬಹಳ. ಆದರೆ ಲಕ್ಷಣಗಳು ಅನುಕೂಲ. ಮಿತ್ರಸುಖ ಉತ್ತಮ. ಗುಪ್ತ ಲಾಭದ ಸಂಭವ. ಆಪ್ತರಿಂದ ಅಲ್ಪಸ್ವಲ್ಪ ಅಪಮಾನ. ಪ್ರವಾಸ ಸಾಮಾನ್ಯ ಆದರೆ ಭೆಟ್ಟಿ ಮತ್ತು ಪತ್ರವ್ಯವಹಾರ ಬಹಳ ಉತ್ತಮ. ಮಘಾದ ಕೊನೆಯ ೩ ಪೂರ್ವಾದ ಮೊದಲನೇ ಚರಣಕ್ಕೆ ತೊಂದರೆ ಕಡಮೆ. ತಾ. ೫, ೬, ೭, ೧೧ ಅನುಕೂಲ.

### ಕನ್ಯಾ

ಪ್ರಕೃತಿ ಉತ್ತಮ ಹೆಂಡತಿಯದೂ ಅನುಕೂಲ. ಆದರೆ ಉಭಯತರಲ್ಲಿ ಒಬ್ಬರೊಬ್ಬರ ಬಗ್ಗೆ ಅಪ್ರೀತಿ. ಒಬ್ಬರೊಬ್ಬರದು ಎರಡನೆಯವರ ಮೇಲೆ ಸ್ವೇಚ್ಛಾ ವರ್ತಿಸಿದುದರ ಆರೋಪ. ಉದ್ಯೋಗದಲ್ಲಿ ಪ್ರಗತಿ ಮತ್ತು ಲಾಭ ಉತ್ತಮ ಮತ್ತು ಪ್ರತಿಷ್ಠೆಯಂತೂ ವಿಪರೀತ ಮತ್ತು ಸ್ಪೃಹಣೀಯ. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಯಶಸ್ಸು. ಪ್ರವಾಸಾದಿ ಕೆಲಸ ಹಿತದ್ದು. ಹಸ್ತಾದ ಕೊನೆಯ ೩ ಮತ್ತು ಚಿತ್ತಾದ ೧ ನೇ ಚರಣಕ್ಕೆ ಹೆಚ್ಚು ಅನುಕೂಲ. ತಾ. ೫, ೬, ೭, ೮ ಅನುಕೂಲ.

### ತುಲಾ

ಪ್ರಕೃತಿ ನಿಮ್ಮದು ಅನುಕೂಲವಿದ್ದರೂ ಹೆಂಡತಿಯದು ಬಹಳ ಕೆಟ್ಟು ಎಲ್ಲ ವಿಷಯಗಳಲ್ಲಿ ಪ್ರಾಪಂಚಿಕ ತೊಂದರೆ ಹೆಚ್ಚು. ಪ್ರಿಯ ಜನರು ದೂರ ಹೋಗುವ ಮತ್ತು ಅಪ್ರಿಯ ಜನರು ಮನೆಗೆ ಬರುವ ಸಂಭವ. ಉದ್ಯೋಗದಲ್ಲಿ ಪ್ರಗತಿ ಮತ್ತು ಲಾಭ ಉತ್ತಮ. ಆದರೆ ನೋಕರರಿಗಿಂತ ಧಂದೆದವರಿಗೆ ಅಪ್ರತಿಷ್ಠೆಯಾದುವ ಹೆಚ್ಚು ಅಂಜಿಕೆ. ನಿರರ್ಥಕ ಸಂಗತಿಗಳಲ್ಲಿ ವೆಚ್ಚ. ಸಂಬಂಧವಿಲ್ಲದಿದ್ದ ಅಪಕೃತ್ಯಗಳ ಹೊಟ್ಟಿ ಆರೋಪ. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಹಿಮ್ಮೆಟ್ಟುವದು. ಪ್ರವಾಸ ಮತ್ತು ಪತ್ರವ್ಯವಹಾರ ಉತ್ತಮ. ಆದರೆ ಭೆಟ್ಟಿಯಲ್ಲಿ ಮನೋಭಂಗ. ಸ್ವಾತಿಯ ಕೊನೆಯ ೩ ಮತ್ತು ವಿಶಾಖಾದ ೧ ನೇ ಚರಣಕ್ಕೆ ತೊಂದರೆ ಕಡಮೆ. ತಾ. ೬, ೭, ೧೧ ಅನುಕೂಲ.

### ವೃಶ್ಚಿಕ

ನಿಮ್ಮ ಪ್ರಕೃತಿ ಅನುಕೂಲ. ಆದರೆ ಹೆಂಡತಿಗೆ ಚಿಲ್ಲರೆ ಕ್ಲೇಶ. ಮಕ್ಕಳಲ್ಲಿ ಉತ್ಕರ್ಷ. ಆದರೆ ಪ್ರಾಪಂಚಿಕ ಸುಖ ಸಾಧಾರಣವೆ. ಉದ್ಯೋಗದಲ್ಲಿ ಪ್ರಗತಿ ಉತ್ತಮ. ಪ್ರತಿಷ್ಠೆ ಧಂದೆದವರಿಗಿಂತ ನೋಕರದಾರರಿಗೆ ಹೆಚ್ಚು ಅನುಕೂಲ. ಲಾಭ ಮನಮೆಚ್ಚುವಷ್ಟು. ಅವಚಿತ ಅಂದರೆ ಗುಪ್ತ ಲಾಭದ ಸಂಭವವೂ ಇದೆ. ಮತ್ತು ಸ್ಪರ್ಧೆಯಲ್ಲಿ ಉಭಯ ಪಕ್ಷಗಳಲ್ಲಿ ಒಳ್ಳೆ ಪ್ರತೀಕಾರ. ಆದರೆ ಯಶಾಪಯಶಸ್ಸು ಅನಿರ್ಣೀತ. ಬಾತಿಗೆಬಾರದವರೆಂದು ಎನಿಸಿದ ಮಿತ್ರರಿಂದಲೆ ಹೆಚ್ಚು ಸುಖ. ಪ್ರವಾಸ ಉತ್ತಮ. ಆದರೆ ಭೆಟ್ಟಿ ಮತ್ತು ಪತ್ರವ್ಯವಹಾರ ತೊಂದರೆಯದು. ಅನುರಾಧೆಯ ಕೊನೆಯ ೩ ಮತ್ತು ಜ್ಯೇಷ್ಠಾದ ೧ ನೇ ಚರಣಕ್ಕೆ ತೊಂದರೆ ಕಡಮೆ. ತಾ. ೫, ೮, ೯, ೧೦ ಅನುಕೂಲ.

—೧೬ನೆಯ ಪುಟಕ್ಕೆ

## ರಶಿಯದಲ್ಲಿ ಪ್ರೇಮ ಮತ್ತು ವಿವಾಹ

ಪಂಗುಬಿನ ಘನದ ಮೇಲೆ ಪಾಶ್ಚಾತ್ಯರ ಗಳ ವಿವಾಹ ವಿಚ್ಛೇದದಿಂದಾಗುವ ದುಃಖಕ್ಕೆ ಎದೆ ಕರಗುವಂತೆ ಮನಃಶಾಸ್ತ್ರಕಾರರಿಂದು ಅಮೇರಿಕದಲ್ಲಿ ಒತ್ತಿ ಒತ್ತಿ ಹೇಳುವುದಕ್ಕೆ ರಶಿಯದ ಪ್ರೊ. ಕೊಲ್ಪನೋವಸ್ಕಿಯವರು ಮುಷ್ಟಿ ಕೊಟ್ಟು ಮಾತನಾಡಿ, ಆ ಕಾರಣದಿಂದಲೇ ರಶಿಯದ ವಿವಾಹ ವಿಚ್ಛೇದ ಕಾಯದೆ ದಿನಕ್ಕೂ ಹೆಚ್ಚು ಹೆಚ್ಚು ಬಿಗಿಯಾಗುತ್ತ ಹೋಗಿದೆ ಎಂದು ನುಡಿದರು. ಸ್ತ್ರೀ ಸ್ವಾತಂತ್ರ್ಯಕ್ಕಾಗಿ ಒದ್ದಾಡುವ ಇಂದಿನ ಭಾರತೀಯ ಸ್ತ್ರೀವಾದಿಗಳು ಇದನ್ನು ತಿಳಿದುಕೊಳ್ಳುವ ನಾಗರಿಕತೆಯನ್ನು ಬೆಳೆಸಿಕೊಳ್ಳದಿದ್ದರೆ ಸಮಾಜ ಕಂಟಕರಾದಾರೆಂಬುದು ನಿರ್ವಿವಾದವಲ್ಲವೆ? ಅವರು ಮತ್ತೂ ಮುಂಬರಿದು ಕಾಯ್ದೆಂದೆಯರು ಹೀಗೆ ಮಗುವನ್ನು ಅನಾಥಸ್ಥಿತಿಗೀಡು ಮಾಡುವುದು ಕಡುಪಾಪಿತನದ ಹೀನ ಬುದ್ಧಿಯ ನಿದರ್ಶನವೆಂದು ಖಂಡಿತೋಕ್ತಿಯಿಂದ ಸಾರಿದರು.

ಲೈಂಗಿಕ ಭಾವನೆ ಸರ್ವ ಪ್ರಾಣಿಸಾಧಾರಣ. ಪ್ರೀತಿಯೆಂಬುದು ಮಾನವನ ವಿಶಿಷ್ಟ ನಾಗರಿಕತೆಗೆ ಸೇರಿದ್ದು. ಅದು ಅವನ ಆಧ್ಯಾತ್ಮಿಕ, ಮಾನಸಿಕ ಮತ್ತು ಸಾಮಾಜಿಕ ಸಂಸ್ಕೃತಿಯ ಉನ್ನತ ಕಟ್ಟಡ. ಕೇವಲ ಶಾರೀರಿಕ ಸಂಬಂಧವು ಕಮ್ಯುನಿಸ್ಟ ದೃಷ್ಟಿಕೋನಕ್ಕೆ ದೂರವಾದದ್ದು. 'ಸ್ವತಂತ್ರ ಪ್ರೇಮ'ವೆಂಬುದು ಅಶ್ಲೀಲ ವ್ಯವಹಾರಕ್ಕೆ ಸೇರಿದ್ದು. ಗಂಡು ಅಥವಾ ಹೆಣ್ಣು ಬಹು ಸಂಖ್ಯೆಯ ಸಂಗಾತಿಗಳನ್ನು ಬಯಸುವ ಸ್ವಭಾವವುಳ್ಳದ್ದೆಂಬುದು ಅವೈಜ್ಞಾನಿಕ. ಜೀವನದಲ್ಲಿ ವೈವಿಧ್ಯತರುವುದು ಹೆಂಡತಿಯ ಕರ್ತವ್ಯ. ಹೆಂಡತಿಯು ತನ್ನ ಬೌದ್ಧಿಕ ಬೆಳವಣಿಗೆಯತ್ತ ಲಕ್ಷಕೊಡಬೇಕು. ಗಂಡ ಹೆಂಡಿರು ಒಮ್ಮತದಿಂದ ದೇಶದ ಮತ್ತು ಜಾತಿಯ ಹಿತಕ್ಕನುಸರಿಸಿ ತಮ್ಮ ಹಿತವನ್ನು ಹೊಂದಿಸಿಕೊಂಡು ಬಾಳತಕ್ಕದ್ದು.

ಲೈಂಗಿಕ ಜೀವನದಲ್ಲಿ ಅತ್ಯಾಸೆ ಮತ್ತು ವಿಶೃಂಖಲವೃತ್ತಿ ಉಂಟಾದರೆ ಅದು ಅನಾರೋಗ್ಯಕರ, ನೀಚತ್ವಕ್ಕೆ ಮಾನವಕುಲವನ್ನು ಒಯ್ಯುವಂಥದು. ಸರಕಾರವುಮಕ್ಕಳನ್ನು ಆರೈಕೆ ಮಾಡುವುದೆಂಬ ಭಾವನೆ ಪಶ್ಚಿಮದ ರಾಷ್ಟ್ರಗಳಲ್ಲಿದೆ. ಅದು ತಪ್ಪು. ಸಾಮ್ಯವಾದ ಇದಕ್ಕೆ ವಿರುದ್ಧವಿದೆ. ಕುಟುಂಬವು ಆಸ್ತಿಯ ಪ್ರಥಮ ಘಟಕವಲ್ಲ. ಅದೊಂದು ಅತಿಮುಖ್ಯ ಸಾಮಾಜಿಕ ಪ್ರಥಮಘಟಕ. ಏಕಪತಿ—ಪತ್ನಿ ಪದ್ಧತಿಯು ಸಾಮ್ಯವಾದದಲ್ಲಿ ಬಹಳ ಉತ್ತಮಸ್ಥಾನ ಪಡೆದಿದೆ. ಜಂಗಟಿಗೆ ಚಿಲ್ಲರೆ ಕಾಪತ್ರಕಾರಗಳನ್ನು ಕಡಿಮೆ ಮಾಡಿದರೆ ಗಂಡನಲ್ಲಿ ಅಪತ್ರ ಪತ್ನಿ ಅವರ ಸಹಯೋಗ ಸ್ವೀಕರಿಸುತ್ತದೆ. ಅಮೆರಿಕಾ ಲಕಾಹಿಯ ಮನಃಶಾಸ್ತ್ರಕಾರರು ಬೇಕಾದ್ದು ಹೇಳಲಿ, ದೈಹಿಕವಾದ ಸಂಬಂಧವು ಯುಕ್ತವಾಗಿ ಬೆಳೆಯಲಾರದು. ಸುಖಕರವಾದ ವಿವಾಹದಲ್ಲಿ ಅತ್ಯೇಹದ ಮುಖ್ಯವಿಲ್ಲ ಎಂಬುದನ್ನು ಅಮೇರಿಕಕ್ಕೆ ವಿರುದ್ಧ ಹಿವರೀತವಾಗಿ ಹಿಂತ ರಶಿಯದ ಬಹುಸಂಖ್ಯಕವಾದ ಸುಖಮಯ ಕುಟುಂಬಗಳು ಸಾರುತ್ತವೆ. ಸಾಮ್ಯವಾದೀ ವಿವಾಹ ಪದ್ಧತಿಯಲ್ಲಿ ಆರ್ಥಿಕ ಕಾರಣಕ್ಕಾಗಿ ಸಂತತಿನಿರೋಧವನ್ನು ಆಚರಿಸುವ ಅವಶ್ಯಕತೆ ಬರದಂತೆ ನೋಡಿಕೊಂಡು ಬೇಕಾದಷ್ಟು ಮಕ್ಕಳು ಹುಟ್ಟಿ ಬೆಳೆಯಲು ಅವಕಾಶವನ್ನು ಕಲ್ಪಿಸಿಕೊಡಲಾಗುವುದು.

ಪ್ರಥಮ ಸಂಪರ್ಶನಜನ್ಯ ಪ್ರೇಮದಿಂದಾಗುವ ಅವಿವೇಕಬದ್ಧ ವಿವಾಹಗಳ ಸಂಖ್ಯೆ ರಶಿಯದಲ್ಲಿ ದಿನೇ ದಿನೇ ಕಡಿಮೆಯಾಗುತ್ತಿದೆ. ಜೇಸರ ಮತ್ತು ಅನ್ಯಪ್ರೇಮಗಳು ಅತಿ ಗಂಭೀರ ಸ್ಥಿತಿಗೆ ಮುಟ್ಟಿದಲ್ಲಿ ಮಾತ್ರ ವಿವಾಹ ವಿಚ್ಛೇದಕ್ಕೆ ಎಡೆಗೊಡಲಾಗುವುದು. ಅದು ನಿಯಮಕ್ಕೊಂದು ಅಪವಾದವಿದ್ದಂತೆ ಎಂದು ಅಲೆಕ್ಸಾಂಡರ್ ಪರ್ಗಮ ಬರೆಯುತ್ತಾನೆ. ಅಸ್ತಿ, ಹಣಕಾಸುಗಳಿಂದ ಹುಟ್ಟುವ ಮತ್ಸರವೂ ಕೆಲವೊಮ್ಮೆ ವಿವಾಹ ವಿಚ್ಛೇದಕ್ಕೆ ಕಾರಣವಾಗಬಹುದು. ಅದು ಬಂಡವಾಲಶಾಹಿಯ ಅಗರ್ಭ ಶ್ರೀಮಂತಿಕೆಯ ನೀಚ ಭಾವನೆಯೇ ಸರಿ. ಅದರಿಂದ ಕುರೂಪದ ಅಸಹ್ಯವಾದ ಅಯೋಗ್ಯ ಪರಿಣಾಮಗಳುಂಟಾಗುವವು. ಅದು ಸಾಮ್ಯವಾದಿಗಳಿಗೆ ಹೇಳಿಸಿದ್ದಲ್ಲ. ದೇಶದಲ್ಲಿ ಚಿಕ್ಕವರ ವಿದ್ಯಾಭ್ಯಾಸ ಮತ್ತು ಉತ್ಪಾದನಶಕ್ತಿ ಇವೆರಡಕ್ಕೂ ಕುಟುಂಬವು ರಾಷ್ಟ್ರದ ದೃಷ್ಟಿಯಿಂದ ಅತಿ ಮಹತ್ವದ ಸಾಮಾಜಿಕಘಟಕವಾಗಿದೆ. ಗಂಡ ಹೆಂಡಿರಲ್ಲಿ ಸಮಾನಾಧಿಕಾರವಿರುವದೇ ಕುಟುಂಬದ ವಿಘಟನೆಗೆ ಕಾರಣ ಎಂಬುದು ಸುಳ್ಳು. ರಾಜಕೀಯ ರಂಗದಲ್ಲಿ ಹಿಂದೆ 'ರೋಂ' ಸರಕಾರ ಇಬ್ಬರು ಸಮಾನಾಧಿಕಾರದ 'ಕಾನ್ಸಲರ' ನ್ನಿಟ್ಟು ನಷ್ಟಹೊಂದಿದ್ದು ನಿಜವಾದರೂ ಪ್ರೇಮದ ಅಡಿಗಲ್ಲಿನ ಮೇಲೆ ನಿಂತ ಕುಟುಂಬದಲ್ಲಿ ಎಲ್ಲರೂ ಸಮಾನಾಧಿಕಾರಿಗಳಾದರೂ ಅರಾಜಕತೆಯುಳಿಯದು. ಇದು ಸಾಮ್ಯವಾದದ ಮೂಲಾಧಾರ ತತ್ವಕ್ಕೆ ಅತ್ಯುತ್ತಮ ನಿದರ್ಶನ.

— ಅರ್ಜುನ

Reg. No. B. 3148

LICENCE No. 3
Licensed to Post without Prepayment

KARMAVEER 5-7-48




(ನಮಗೆ ಬಂದ ಎಲ್ಲ ಪುಸ್ತಕಗಳನ್ನು ಸಾದರದಿಂದ ಸ್ವೀಕರಿಸಿದೆ ಉಲ್ಲೇಖ ಮಾಡುವೆವಾದರೂ ಆ ಎಲ್ಲವುಗಳ ವಿಮರ್ಶೆ ಮಾಡಿಯೇ ತೀರುವೆವೆಂದು ಗ್ರಹಿಸಕೂಡದಾಗಿ ಈ ಮೂಲಕ ತಿಳಿಸಬಯಸುತ್ತೇವೆ. —ಸಂ.)

### ಶ್ರೀ ಶಾರದಾದೇವಿ

ಬರೆದವರು ಶ್ರೀ ಕುವೆಂಪು ಅವರು. ಪ್ರಕಾಶಕರು ಶ್ರೀ ರಾಮಕೃಷ್ಣಾಶ್ರಮ, ಮೈಸೂರು ಅವರು. ಪುಟ ಸಂಖ್ಯೆ ೨೧೭; ಬೆಲೆ ೩ ರೂಪಾಯಿ.

ಶ್ರೀರಾಮಕೃಷ್ಣ ಪರಮಹಂಸರ ಮತ್ತು ವಿವೇಕಾನಂದರ ಜೀವನೇತಿಹಾಸವನ್ನು ಅನನ್ಯಶೈಲಿಯಿಂದ ಹೃದಯಾರಾಧ್ಯವಾಗಿ ಬರೆದ ಕನ್ನಡದ ಕವಿ ಪುಟ್ಟಪ್ಪನವರು ಶಾರದಾ ಮಣಿಯ ಚರಿತ್ರೆಯನ್ನೂ ಬರೆದು ಆಧುನಿಕ ಭಾರತೀಯ ಗುರುತ್ರಯರ ವಿಷಯವನ್ನು ಜನರಿಗೆ ಪರಿಚಯ ಮಾಡಿಕೊಡುವಲ್ಲಿ ಸಂಪೂರ್ಣತೆಯನ್ನು ಮುಟ್ಟಿದಂತಾಯಿತು. ಕನ್ನಡದ ಅಕ್ಕಮಹಾದೇವಿಯಂತೆ ಶ್ರೀ ಶಾರದಾದೇವಿಯವರು ಇಹವನ್ನು ತ್ಯಜಿಸಿ ಪರಸುಖವನ್ನು ಭಜಿಸಿದ ಮಹಾವ್ಯಕ್ತಿಗಳು. ಸಾಮಾನ್ಯ ವಿವಾಹ ಜೀವನದ ಲೈಂಗಿಕಾಂಶವನ್ನು ಅಲಕ್ಷಿಸಿ ಅವರ ಜೀವನ ಸಾಗಿದ್ದರೂ ಅಕ್ಕನವರಂತೆ ಇಹ ವ್ಯಾಪಾರವನ್ನು ಸಂಪೂರ್ಣವಾಗಿ ತ್ಯಜಿಸದಿದ್ದುದರಿಂದ ಅವರ ಆದರ್ಶ ಕನ್ನಡತಿಯರಿಗೆ ನೂರಕ್ಕೆ ೯೯ ರಷ್ಟು ಹೊಂದುವಂಥದಿದೆ.

ಆಶ್ರಮದ ಮಡಿಲಲ್ಲಿ ಬೆಳೆದ ಗ್ರಂಥಕರ್ತರ ಕೈಯಿಂದ ಬಂದ ಈ ಪುಸ್ತಕದಲ್ಲಿ ಕಥಾನಾಯಿಕೆಯ ವ್ಯಕ್ತಿಚಿತ್ರ ವಿವರಪೂರ್ಣವಾಗಿ ಮನೋಹರವಾಗಿ ಮೂಡಿದೆ. ಪುಟ್ಟಪ್ಪನವರ ಶೈಲಿಯ ಬಗ್ಗೆ ಹೆಚ್ಚು ಹೇಳಬೇಕಾಗಿಲ್ಲ. ಅದು ಶ್ರೀ ಮನ್ಗಂಭೀರವಿದ್ದೂ ವಸ್ತುಪಾತ್ರರಸಾವಧಾನದಿಂದ ಸಂದರ್ಭೋಚಿತವಾಗಿ ಸರಳ ಮಧ್ಯಮ ಕಠಿನ ರೀತಿಗಳಿಂದ ಹೋಗತಕ್ಕುದು. ಆ ಪ್ರಕಾರ ಇಲ್ಲಾದರೂ ವೈವಿಧ್ಯದ ಔಚಿತ್ಯದಿಂದ ಸಾಗಿದೆ. ಆದರೆ ಪುಸ್ತಕದಲ್ಲಿಯ ಅಚ್ಚಿನ ದೋಷಗಳ ಜೊತೆಗೆ ಗ್ರಂಥಕರ್ತರ ನಾಯಕಿ, ವಿನಯ, ಪ್ರಾಮುಖ್ಯತೆ, ಬಾಲಕಿ, ಅನುಸೂಯೆ, ಮುಂತಾದ ಕೆಲವು ಅಪಪ್ರಯೋಗಗಳು ಇಲ್ಲದಿದ್ದರೆ ಚೆನ್ನಾಗಿರುತ್ತಿತ್ತೆನಿಸುತ್ತದೆ. ಏಕೆಂದರೆ "ಸ್ವಾದ್ವಪುಃ ಸುಂದರಮುಖಿ ಶ್ರೀಕ್ಷೇತ್ರೇಣೇಕೇನ ದುರ್ಭಗಂ" ಎಂಬಂತಾಗುತ್ತದೆ.

ಪುರುಷ ಹೃದಯದ ಔದಾರ್ಯವನ್ನು ನಿಚ್ಚಳವಾಗಿ ತೋರುವ ಮೊದಲ ಅಧ್ಯಾಯವು ಸುಸಂಗತವಾಗಿ ಸಾಧಾರವಾಗಿ ಬರೆಯಲ್ಪಟ್ಟಿದೆ. ಓದುಗರು ವಾಕ್ಯಗಳ ಈ ಔದಾರ್ಯಸಹಜ ಪಂಕ್ತಿಗಳ ಸಾರಾಂಶವನ್ನು ವೈಜ್ಞಾನಿಕ ದೃಷ್ಟಿಯಿಂದ ಗ್ರಹಿಸಬೇಕು. ಸೃಷ್ಟಿಯಲ್ಲಿ ಮಾನವರನ್ನು ಸ್ತ್ರೀ ಪುರುಷ, ಹಿಂದು ಮುಸಲ್ಮಾನ, ದರಿದ್ರ ಧನಿಕ ಎಂಬ ವರ್ಗಗಳಲ್ಲಿ ಕಾಣುವುದು ಸಂಸ್ಕಾರದ ಅವರಣಭೇದದಿಂದಲ್ಲದೆ ಪರಮಾರ್ಥತಃ ಅಲ್ಲ; ಅವರ ಸತ್ಯ ಸ್ವರೂಪ ಕೇವಲ ಆತ್ಮತ್ವ ಎಂಬುದನ್ನು ತಿಳಿದರೆ ವರ್ಗಕಲಹ ತಪ್ಪಿ ಸೌಹಾರ್ದ, ಸೌಭ್ರಾತ್ರ, ಸೌಖ್ಯವಗಳು ಮನದಲ್ಲಿ ಬೆಳೆದು ಮಾನವತೆಯ ಸಾರ್ಥಕ್ಯವನ್ನು ಊಜಿಸುವವು. ಉತ್ತಮಾಧಮ ಭೇದಗ್ರಹಣದ ತಾರತಮ್ಯ ಮಾನದಂಡವು ಆಭಾಸಿಕವೆಂಬುದನ್ನು ಸ್ತ್ರೀಪುರುಷರು ಅರಿತರೆ ಬುದ್ಧಿವಿಕಾರಗಳು ಮರೆಯಾಗಿ ಮಾನವರ ಮೂಲಭಾವಗಳು ಮತ್ತು ಮೂಲ ಶಕ್ತಿಗಳು ಒಂದೇ ಕುಲದವು, ಒಂದೇ ಎತ್ತರಕ್ಕೆ ಏರಬಲ್ಲವು ಎಂಬುದನ್ನು ಮನಗಾಣಬಹುದು. ಈ ಮಾತನ್ನು ಹೇಳಲು ಇಂದಿನ ಅತಿಕ್ರಾಂತ ಬುದ್ಧಿಯ ಸುಧಾರಕರ ಮತ್ತು ಅಧೋಗತ ಬುದ್ಧಿಯ ಸನಾತನಿಗಳ ಅತಿಪ್ರವೃತ್ತಿಯೇ ಕಾರಣ. ಈ ಪಕ್ಷ ಮಾರ್ಗಗಳ ಖಂಡನೆಯನ್ನು ಆಗಾಗ ಬುದ್ಧಿವಂತ ವಾಚಕರು 'ಕರ್ಮವೀರ'ದಲ್ಲಿ ಕಾಣದಿರರು. ಗ್ರಂಥಕರ್ತರ ಮುನ್ನುಡಿಯನ್ನು 'ವೈನತೇಯ ದೃಷ್ಟಿ'ಯಿಂದ ಅವಗಾಹಿಸಿದರೆ ಈ ಭಾವ ಅಲ್ಲಿಯೂ ಸ್ಫುಟವಾಗಿ ತೋರುತ್ತದೆ.

ಮುನ್ನುಡಿಯಲ್ಲಿ ಲೀಲಾವಾದವನ್ನು ಪುರಸ್ಕರಿಸಿ ಶಾರದಾದೇವಿಯವರ ದೇವತ್ವವನ್ನು ಪ್ರಶಂಸಿಸಲು ಬಳಸಿದ ತರ್ಕ ಸಾಹಿತ್ಯವಲ್ಲದೆ ಶಾಸ್ತ್ರಕ್ಷೇತ್ರದ್ದಲ್ಲ. ಅದು ಭಕ್ತಿಭೂಯಿಷ್ಠವಾದ ಮಾತು. ೨ ರಿಂದ ೨೧ ನೆಯ ಅಧ್ಯಾಯಗಳಲ್ಲಿ ಜನನದಿಂದ ಅಮೃತತ್ವಸಿದ್ಧಿಯ ವರೆಗಿನ ಜೀವನೇತಿಹಾಸವು ಸರಳ ಸುಂದರವಾಗಿ ಸಾಗಿದೆ. ಮಾನವ್ಯಲತೆಯಾಗಿ ಹುಟ್ಟಿ ಎತ್ತರಕ್ಕೆದ್ದು ದೇವಲೋಕದ ಹೂವಾದ ಶಾರದಾದೇವಿಯ ವರ್ಣನೆಯಲ್ಲಿಯ ಸೊಗಸಿಗೆ ನಿದರ್ಶನಗಳು ಹಲವಾರಿವೆ.

"ಆಕೆಯನ್ನು ಭಕ್ತರು ಜಗನ್ಮಾತೆಯ ಪೀಠದ ಮೇಲೆ ಇಟ್ಟು ಪೂಜಿಸಿದರು... ಆದರೂ ಶ್ರೀ ಶಾರದಾದೇವಿಯವರು ತಮ್ಮಲ್ಲಿ ಯಾವ ಹಿರಿದಾದ ಗುಣವೂ ಇಲ್ಲ, ತಾವು ಏನೂ ಅರಿಯದ ಹಳ್ಳಿಯ ಹುಡುಗಿ. ಶ್ರೀಗುರುದೇವರ ಪದತಲದಲ್ಲಿ ಶರಣುಹೊಂದಿದ ಮೇಲೆ ಕಿಂಚಿತ್ ಅವರ ಪ್ರಭೆ ಇಲ್ಲಿ ಕಾಣುವುದೇ ಹೊರತು ಅದು ನನ್ನದಲ್ಲ ಎಂದು ಜನರು ಅವರಿಗೆ ಕೊಡುವ ಕೀರ್ತಿಯನ್ನೆಲ್ಲ ಪುನಃ ಗುರುದೇವನಿಗೆ ಕೊಟ್ಟು ಧನ್ಯರಾಗುತ್ತಿದ್ದರು; ಶ್ರೀ ಶಾರದಾದೇವಿಯವರಿಗೆ ನಾಶವೆಂಬುದಿಲ್ಲ. ನಿರ್ವಿಕಲ್ಪ ಸಮಾಧಿಯ ಸವಿಯನ್ನು ಕೂಡ ಒತ್ತಟ್ಟಿಗಿಟ್ಟು ಭವಬಂಧನದಲ್ಲಿ ಎಲ್ಲಿಯವರೆಗೆ ಜೀವಿಗಳು ಸಿಕ್ಕಿ ನರಳುತ್ತಿರುವರೋ ಅಲ್ಲಿಯವರೆಗೂ ನಮ್ಮ ಉದ್ಧಾರಕ್ಕಾಗಿ ಆ ಮಹಾತಾಯಿಯ ಎದೆ ತಲ್ಲಣಿಸುತ್ತಿರುವುದು" ಎಂಬವು ಕೇವಲ ಒಂದೆರಡು ಮಾದರಿಗಳಷ್ಟೆ.

ಗ್ರಂಥಕರ್ತರು ಬರೆದ ಪರಮಹಂಸರ ಇತಿಹಾಸವು ಪಠ್ಯಪುಸ್ತಕವಾಗಿತ್ತು. ಅದೇ ಭಾಗ್ಯ ಈ ಪುಸ್ತಕಕ್ಕೂ ಬರಬಹುದಾಗಿದೆ. ಶಿಷ್ಯಸಹಜವಾದ ಗುರುದಕ್ಷಿಣಾದಾನವು ಗುರುತ್ರಯದ ಜೀವನ ಚರಿತ್ರೆಗಳ ಬರಹದಿಂದ ಪುಟ್ಟಪ್ಪನವರಿಂದ ಸಂಪನ್ನವಾಯಿತು. ಅವರ ಸೇವಾಕಾರ್ಯದಿಂದ ಉಪಕೃತರಾದ ಕನ್ನಡಿಗರ ಪರವಾಗಿ ಅವರನ್ನು ಅಭಿನಂದಿಸದಿರಲಾರೆವು.

### ಕರ್ನಾಟಕ ಅರಣ್ಯ ಸಂಪತ್ತು

ಲೇಖಕರು, ಶ್ರೀ ವೆಂಕಟರಾವ ಕಮಲಾಪೂರ, ಡಿವ್ಹಿಜನಲ್ ಫಾರೆಸ್ಟ ಆಫೀಸರ, ಪುಣೆ. ಅನುವಾದಕರು, ಶ್ರೀ ಹುಚ್ಚರಾವ ದೊಡಿಹಳ್ಳಿ, ಬಿ. ಎ. ಶಿಕ್ಷಣ ಸಾಹಿತ್ಯ ಪ್ರಕಟನೆ ಧಾರವಾಡ. ಪುಟ ೧೨.. ಬೆಲೆ ೨ ಆಣೆ.

ಕರ್ನಾಟಕದ ಅರಣ್ಯ ಸಂಪತ್ತು ಎಷ್ಟಿದೆ ಏನಿದೆ ಎಂಬುದನ್ನು ಎತ್ತಿ ತೋರಿಸುವ ಲೇಖಗಳಾಗಲಿ ಪುಸ್ತಕಗಳಾಗಲಿ ಕನ್ನಡದಲ್ಲಿ ತೀರ ವಿರಲ. ಈ ದೃಷ್ಟಿಯಿಂದ ಮೇಲ್ಕಾಣಿಸಿದ ಲೇಖವು ಚಿಕ್ಕದಿದ್ದರೂ ಉಪಯುಕ್ತ ಸಂಗತಿಗಳಿಂದ ಕೂಡಿದೆ. ಈ ಬಗೆಯ ವಿಷಯಗಳಲ್ಲಿ ಆಸಕ್ತಿ ಇದ್ದವರು ಅಗತ್ಯ ಓದಬೇಕಾದುದು.

### गांधीजी—श्रद्धांजलियाँ

ಪ್ರಧಾನ ಸಂಪಾದಕರು ಕಮಲಾಪತಿ ತ್ರಿಪಾಠಿ. ಪ್ರಕಾಶಕರು ಜಗನ್ನಾಥ ಶರ್ಮ ಕಾಶೀ ವಿದ್ಯಾಪೀಠ. ಪ್ರಕಾಶನ ವಿಭಾಗ ಬನಾರಸ ಛಾವಣಿ. ಡೆಮಿ ಅಷ್ಟಪತ್ರದ ೧೪೪ ಪುಟಗಳು ಬೆಲೆ ೧॥ ರೂಪಾಯಿ.

ಸ್ವತಂತ್ರ ಹಿಂದುಸ್ತಾನದ ಜನಕರಾಗಿದ್ದ ಮಹಾತ್ಮಾ ಗಾಂಧಿಯವರ ಸ್ಮರಣಾರ್ಥ ಕಾಶಿ ವಿದ್ಯಾಪೀಠದವರು ಹೊರಡಿಸಿದ ಮೊದಲನೇ ಪುಷ್ಪವಿದು. ಗಾಂಧೀಜಿ ಅಸಹಕಾರದ ಕಹಳೆಯನ್ನೂದಿ ಶಾಲೆ ಕಾಲೇಜಗಳಿಗೆ ಬಹಿಷ್ಕಾರ ಹಾಕಿ ರಾಷ್ಟ್ರೀಯ ಶಾಲೆಗಳನ್ನು ಸಂಸ್ಥಾಪಿಸಲು ಹವಣಿಸಿದಾಗ ಕಾಶೀ ವಿದ್ಯಾಪೀಠವು ಸ್ಥಾಪಿತವಾಯಿತು. ಅಂದಿನಿಂದ ಕಾಶೀ ವಿದ್ಯಾಪೀಠವು ಎಲ್ಲ ಬಗೆಯ ರಾಷ್ಟ್ರೀಯ ಚಟುವಟಿಕೆಗಳಲ್ಲಿ ಭಾಗವಹಿಸುತ್ತಿರುವದು. ಒಂದು ಬಗೆಯಿಂದ ಈ ಸಂಸ್ಥೆಯ ಜನಕರೆಂತಿದ್ದ ಗಾಂಧೀಜಿಯ ಸ್ಮರಣಾರ್ಥ ಈ ಸಂಸ್ಥೆಯವರು ಇಪ್ಪತ್ತಾರು ಗ್ರಂಥಗಳನ್ನು ಹೊರಡಿಸಬೇಕೆಂದು ನಿರ್ಧರಿಸಿ ಈ ಮೊದಲನೇ ಗ್ರಂಥವನ್ನೀಗ ಪ್ರಸಿದ್ಧಿಸಿದ್ದಾರೆ. ಪ್ರತಿ ಪುಸ್ತಕದ ಬೆಲೆ ಒಂದೂವರೆ ರೂಪಾಯಿ. ಈ ಗ್ರಂಥಮಾಲೆಯಲ್ಲಿ ಮಹಾತ್ಮರ ಜೀವನದಲ್ಲಿಯ ವಿವಿಧ ಚಟುವಟಿಕೆಗಳನ್ನು ವಿವರವಾಗಿ ವರ್ಣಿಸಿ ಅವರ ಬಗ್ಗೆ ತಮ್ಮಲ್ಲಿದ್ದ ಆದರ ಅಭಿಮಾನಗಳನ್ನು ವ್ಯಕ್ತಪಡಿಸುತ್ತಿರುವದು ಅಭಿನಂದನೀಯ. ಮಹಾತ್ಮರಿಗೆ ಅತ್ಯಂತ ಪ್ರಿಯವಾಗಿದ್ದ ರಾಷ್ಟ್ರಭಾಷೆಯಲ್ಲಿಯೇ ಈ ಗ್ರಂಥಮಾಲೆಯನ್ನು ಹೊರಡಿಸಲನುವಾದುದು ಅನುಕರಣೀಯ. ಪ್ರಸ್ತುತ ಪುಸ್ತಕದಲ್ಲಿ ದೇಶ ವಿದೇಶೀಯ ಮಹನೀಯರ ಮತ್ತು ಸಂಘ ಸಂಸ್ಥೆಗಳ ಶ್ರದ್ಧಾಂಜಲಿಗಳನ್ನು ಮತ್ತು ಆಕರ್ಷಕ ಚಿತ್ರಗಳನ್ನು ಪ್ರಕಟಿಸಲಾಗಿದೆ. ಸರಳವಾದ ಭಾಷೆ ಸುಂದರ ಮುದ್ರಣ ಮನಮೋಹಕ ಛಾಯಾಚಿತ್ರಗಳಿಂದ ಪುಸ್ತಕವು ಆಕರ್ಷಕವಾಗಿದೆ. ಕನ್ನಡಿಗರೆಲ್ಲ ಈ ಗ್ರಂಥಮಾಲೆಯ ಗ್ರಾಹಕರಾಗಿ ಈ ಸ್ತುತ್ಯ ಉಪಕ್ರಮವನ್ನು ಪ್ರೋತ್ಸಾಹಿಸುವುದಲ್ಲದೆ ಗಾಂಧೀಜಿಯ ಜೀವನ ಚರಿತ್ರೆಯ ವಿವರಗಳನ್ನು ತಿಳಿದು ತಮ್ಮ ಜೀವನದಲ್ಲಿ ಅದರ ಸಾರವನ್ನು ಅಳವಡಿಸಿಕೊಳ್ಳಲು ಪ್ರಯತ್ನಿಸುವದು ಅವಶ್ಯವಾಗಿದೆ.

**1) Kashmir**

(Appeal to World Conscience)

By Sheikh Mohammad Abdullah
Price 8 Annas.

2) Architects of New Kashmir

3) Kashmir Defends Democray—

ಕಾಶ್ಮೀರ ಸರಕಾರದವರು ಹೊರಡಿಸಿದ ಪ್ರಕಟನೆಗಳಿವು. ಕಾಶ್ಮೀರಿನ ಜನರು ಸ್ವಾತಂತ್ರ್ಯಕ್ಕಾಗಿ ನಡೆಸಿದ ಚಟುವಟಿಕೆಗಳನ್ನು ಈ ಚಿಕ್ಕ ಪ್ರಕಟನೆಗಳಲ್ಲಿ ವಿವರಿಸಲಾಗಿದೆ. ವಿವಿಧ ಚಿತ್ರಗಳಿಂದ ಪ್ರಕಟನೆಗಳು ಮುದ್ದಾಗಿವೆ. ಕಾಶ್ಮೀರಿನ ಸದ್ಯದ ಹೋರಾಟದ ಹಿನ್ನೆಲೆ, ಅಲ್ಲಿನ ಜನರಬೇಡಿಕೆ, ಅವರು ಸ್ವಾತಂತ್ರ್ಯವನ್ನೆಂತು ರಕ್ಷಿಸಿಕೊಳ್ಳುತ್ತಿರುವರು ಇವೇ ಮೊದಲಾದ ಮಾತುಗಳನ್ನು ತಿಳಿದುಕೊಳ್ಳಬಯಸುವವರಿಗೆ ಈ ಪ್ರಕಟನೆಗಳು ಉಪಯುಕ್ತವಾಗಿವೆ. ಕಾಶ್ಮೀರ ಸರಕಾರದ ಸುದ್ದೀ ಶಾಖೆಯವರಿಂದ ಇವನ್ನು ತರಿಸಿಕೊಳ್ಳಬಹುದಾಗಿದೆ.



### ವಾರದ ಭವಿಷ್ಯ

(೧೫ನೆಯ ಪುಟದಿಂದ)

#### ಧನು

ಪ್ರಕೃತಿ ಕೆಡುವ ಸಂಭವ ಸ್ತ್ರೀ ಸುಖ ಅನುಕೂಲ. ಆದರೆ ಮಕ್ಕಳಿಂದ ಅಪ್ರತಿಷ್ಠೆ. ಎಲ್ಲ ವಿಷಯಗಳಲ್ಲಿ ಪ್ರಾಪಂಚಿಕ ಸುಖ ಕಡಮೆ. ಮೇಲಿಂದ ಮೇಲೆ ಮನಃಕ್ಷೋಭ. ಉದ್ಯೋಗದಲ್ಲಿ ಉತ್ತಮ ಪ್ರಗತಿ ಒಳ್ಳೆ ಪ್ರತಿಷ್ಠೆ ಮತ್ತು ತುಂಬಾ ಲಾಭ. ಆದರೆ ವೆಚ್ಚ ವಿಪರೀತವಾಗುವದರಿಂದ ಸಮಯಕ್ಕೆ ನಾಲ್ಕು ದುಡ್ಡು ಕೂಡ ಇರದಂತಾಗುವದು. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಉಭಯ ಪಕ್ಷಗಳಲ್ಲಿ ಸಮಾನ ಸ್ಥಿತಿ ಪ್ರವಾಸಾದಿ ಕೆಲಸ ಅನುಕೂಲ. ಮೂಲಾದ ಕೊನೆಯ ೩ ಮತ್ತು ಪೂರ್ವಾಷಾಢಾದ ೧ ನೇ ಚರಣಕ್ಕೆ ತೊಂದರೆ ಕಡಮೆ. ತಾ. ೬, ೭, ೧೦, ೧೧ ಅನುಕೂಲ.

#### ಮಕರ

ಪ್ರಕೃತಿ ಉತ್ತಮ. ಹೆಂಡತಿಯದೂ ಹಾಗೆಯೇ. ಆದರೆ ಮಕ್ಕಳಿಂದ ಅಪಕೃತ್ಯಗಳಾಗುವದರಿಂದ ಪ್ರಾಪಂಚಿಕ ಸಮಾಧಾನ ಕಡಮೆ. ಆಪ್ತರು ಮತ್ತು ನೆರೆಹೊರೆಯವರಿಂದ ಮನಸ್ಸಿಗೆ ಹತ್ತುವಂಥ ಮಾತುಗಳು ಮತ್ತು ವರ್ತನೆ. ಉದ್ಯೋಗದಲ್ಲಿ ತುಂಬಾ ಲಾಭ. ಆದರೆ ಧಂದೇದವರಿಗಿಂತ ನೌಕರರ ಪ್ರಗತಿ ಮತ್ತು ಪ್ರತಿಷ್ಠೆ ಹೆಚ್ಚು ಅನುಕೂಲ. ಸ್ತ್ರೀಯರಿಂದ ಹೆಚ್ಚು ದ್ವೇಷ ಮತ್ತು ಶತ್ರುತ್ವ. ಮಿತ್ರಸುಖ ಉತ್ತಮ. ಆದರೆ ಶತ್ರುಗಳಿಂದಲೂ ವಿಪರೀತ ತೊಂದರೆ. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಲಾಭ. ಉಭಯಪಕ್ಷಗಳಲ್ಲಿ ಸಮಾನಸ್ಥಿತಿ. ಪ್ರವಾಸಾದಿ ಕೆಲಸ ತೊಂದರೆಯದು. ಶ್ರವಣಾದ ಕೊನೆಯ ೩ ಮತ್ತು ಧನಿಷ್ಠಾದ ೧ ನೇ ಚರಣಕ್ಕೆ ತೊಂದರೆ ಕಡಮೆ. ತಾ. ೫, ೮, ೯ ಅನುಕೂಲ.

#### ಕುಂಭ

ನಿಮ್ಮ ಪ್ರಕೃತಿ ಸಾಧಾರಣವೇ. ಆದರೆ ಹೆಂಡತಿ ಮಕ್ಕಳ ಪ್ರಕೃತಿ ಅನುಕೂಲ. ಮನೆ ವೆಚ್ಚ ಹೆಚ್ಚು. ಕೆಟ್ಟ ಮನಸ್ಸಿನ ಅತಿಥಿಗಳು ಬರುವದರಿಂದ ಎಲ್ಲರ ಮನಸ್ಸು ದುಷ್ಟ. ಆದರೆ ಉಳಿದ ವಿಷಯಗಳಲ್ಲಿ ಪ್ರಾಪಂಚಿಕ ಸುಖ ಉತ್ತಮ. ಉದ್ಯೋಗದಲ್ಲಿ ಪ್ರಗತಿ ಹೆಚ್ಚು. ಆದರೆ ಪ್ರತಿಷ್ಠೆ ಮತ್ತು ಲಾಭ ಸಾಧಾರಣವೇ. ಮಿತ್ರರೊಡನೆ ಕಷ್ಟದಿಂದ ವರ್ತಿಸಿದ ಲೋಕಾಪವಾದ. ಬಂಧುವರ್ಗದವರು ವಿಪರೀತಪೇಚು ಮೈಮೇಲೆ ಹಾಕುವ ಸಾಹಸಮಾಡುವರು. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಯಶಸ್ಸು. ಭೆಟ್ಟಿಗಿಂತ ಪ್ರವಾಸ ಮತ್ತು ಪತ್ರವ್ಯವಹಾರ ಹೆಚ್ಚು ಅನುಕೂಲ. ಶತತಾರಿಕೆಯ ಕೊನೆಯ ೩ ಮತ್ತು ಪೂರ್ವಾಭಾದ್ರಪದದ ೧ನೇ ಚರಣಕ್ಕೆ ತೊಂದರೆ ಕಡಮೆ. ತಾ. ೬, ೭, ೧೦, ೧೧ ಅನುಕೂಲ.

#### ಮೀನ

ಎಲ್ಲರಪ್ರಕೃತಿ ಉತ್ತಮ. ಆದರೆಪತಿಪತ್ನಿಯರಲ್ಲಿ ಪ್ರೇಮ ಕಡಮೆ. ಅನಾವಶ್ಯಕ ಮಾತಿಗಾಗಿ ಉಭಯತರಲ್ಲಿ 'ರಣಕತ್ತಲ' ವಾಗುವ ಸಂಭವ. ಉದ್ಯೋಗದಲ್ಲಿ ಪ್ರತಿಷ್ಠೆಗಿಂತ ಪ್ರಗತಿ ಮತ್ತು ಲಾಭ ಬಹಳ ಉತ್ತಮ. ಮಿತ್ರಸುಖ ಉತ್ತಮ ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಯಶಸ್ಸು. ಪ್ರವಾಸಾದಿ ಕೆಲಸ ಹಿತದ್ದು. ಉತ್ತರಾಭಾದ್ರಪದದ ಕೊನೆಯ ೩ ಮತ್ತು ರೇವತಿಯ ೧ ನೇ ಚರಣಕ್ಕೆ ತೊಂದರೆ ಕಡಮೆ. ರಾ. ೫, ೮, ೯ ಅನುಕೂಲ.



ಈ ಪತ್ರಿಕೆಯು ಹುಬ್ಬಳ್ಳಿಯ ಸಂಯುಕ್ತ ಕರ್ನಾಟಕ ಮುದ್ರಣಾಲಯದಲ್ಲಿ "ಲೋಕಶಿಕ್ಷಣ ಟ್ರಸ್ಟಿನ" ಪರವಾಗಿ ಹ. ರಾ. ಪೋತದಾರರಿಯವರಿಂದ ಮುದ್ರಿಸಿ ಪ್ರಕಟವಾಯಿತು.